# ನಾಟಿವೈದ್ಯ ಪದ್ಧತಿ ಮತ್ತು ಮಹಿಳೆಯರು

(ಮಾನ್ವಿ ತಾಲೂಕನ್ನು ಅನುಲಕ್ಷಿಸಿ)

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)


ಸಂಶೋಧಕರು

ಹನುಮೇಶ

ಮಾರ್ಗದರ್ಶಕರು

ಡಾ. ಶಿವಾನಂದ ಎಸ್. ವಿರಕ್ತಮಠ

ಸಹ ಪ್ರಾಧ್ಯಾಪಕರು

ಮಹಿಳಾ ಅಧ್ಯಯನ ವಿಭಾಗ







ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೧

# ನಾಟಿವೈದ್ಯ ಪದ್ಧತಿ ಮತ್ತು ಮಹಿಳೆಯರು

(ಮಾನ್ವಿ ತಾಲೂಕನ್ನು ಅನುಲಕ್ಷಿಸಿ)

(ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಪ್ರಬಂಧ)

ಸಂಶೋಧಕರು
ಹನುಮೇಶ

ಮಾರ್ಗದರ್ಶಕರು
ಡಾ.ಶಿವಾನಂದ ಎಸ್.ವಿರಕ್ತಮಠ
ಸಹ ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ



ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೦

## ಸಂಶೋಧಕರ ಪ್ರಮಾಣ ಪತ್ರ

ನಾಟಿವೈದ್ಯ ಪದ್ಧತಿ ಮತ್ತು ಮಹಿಳೆಯರು (ಮಾನ್ವಿ ತಾಲೂಕನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ.ಶಿವಾನಂದ ಎಸ್.ವಿರಕ್ತಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಸಂಶೋಧನ ಸಂಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಯಾವುದೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಂಶೋಧಕರು

ಸ್ಥಳ: ವಿದ್ಯಾರಣ್ಯ

ದಿನಾಂಕ: 14-9-2010

ಹನುಮೇಶ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

## ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಹನುಮೇಶ ಅವರು ನಾಟಿವೈದ್ಯ ಪದ್ಧತಿ ಮತ್ತು ಮಹಿಳೆಯರು (ಮಾನ್ವಿ ತಾಲೂಕನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಇವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು

ಡಾ.ಶಿವಾನಂದ ಎಸ್.ವಿರಕ್ತಮಠ
ಸಹ ಪ್ರಾಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 14/9/10

# ಪರಿವಿಡಿ

## ಅಧ್ಯಾಯ-೧

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವೈಧಾನಿಕತೆ

೧.೪. ಅಧ್ಯಯನದ ಸ್ವರೂಪ

# ಅಧ್ಯಾಯ ೧

## ಅಧ್ಯಯನದ ಉದ್ದೇಶ, ವ್ಯಾಪ್ತಿ, ವೈಧಾನಿಕತೆ ಮತ್ತು ಸ್ವರೂಪ

### ಪ್ರಸ್ತಾವನೆ

"ಆರೋಗ್ಯವೇ ಮಹಾಭಾಗ್ಯ" ಎಂಬ ನಾಣ್ಣುಡಿಯಂತೆ ಪ್ರತಿಯೊಬ್ಬ ವ್ಯಕ್ತಿಯೂ ಆರೋಗ್ಯದಿಂದ ಇದ್ದರೆ ಜೀವನದಲ್ಲಿ ಏನು ಬೇಕಾದರೂ ಸಾಧಿಸಬಹುದು. ಹಾಗಾಗಿ ಇಂದು ಆರೋಗ್ಯಕ್ಕೆ ಹೆಚ್ಚಿನ ಮಹತ್ವವನ್ನು ಕಾಪಾಡಿಕೊಳ್ಳಲು ಹಲವಾರು ವಿಧಾನಗಳನ್ನು ಅನುಸರಿಸಲಾಗುತ್ತಿದೆ. ಅವುಗಳಲ್ಲಿ ಮುಖ್ಯವಾಗಿ ಹೋಮಿಯೋಪತಿ, ಅಲೋಪತಿಕ್, ನಾಟಿ ಔಷಧ, ಆಯುರ್ವೇದ ಔಷಧಿ, ಯುನಾನಿ ಹೀಗೆ ಮುಂತಾದ ಪದ್ಧತಿಗಳ ಮೂಲಕ ಆರೋಗ್ಯವನ್ನು ಕಾಪಾಡಿಕೊಳ್ಳಲಾಗುತ್ತಿದೆ. ಇಲ್ಲಿ ಮುಖ್ಯವಾಗಿ ನಾಟಿ ವೈದ್ಯ ಪದ್ಧತಿಯು ಅತ್ಯಂತ ಹೆಚ್ಚು ಪರಿಣಾಮಕಾರಿಯಾದ ವೈದ್ಯ ಪದ್ಧತಿಯಾಗಿದೆ. ಪ್ರತಿಯೊಂದು ಗ್ರಾಮದಲ್ಲಿಯೂ ಕೂಡ ನಾಟಿ ಔಷಧಿಯನ್ನು ನೀಡವವರನ್ನು ಕಾಣಬಹುದು. ಆದರೆ ಅವರು ಬೆಳಕಿಗೆ ಬಂದಿರುವುದಿಲ್ಲ. ಬದಲಾಗಿ ಈ ಪದ್ಧತಿಯು ಒಂದು ಹವ್ಯಾಸವಾಗಿ ಬೆಳೆದು ಬಂದಿದ್ದು, ತಮ್ಮ ಹಿರಿಯರಿಂದ ಕಲಿತುಕೊಂಡು ಬಂದಂತಹದ್ದಾಗಿರುತ್ತದೆ. ಇದು ಜನರಿಗೆ ಸುಲಭವಾಗಿ ದೊರೆಯುವ ಔಷಧಿ ಪದ್ಧತಿಯಾಗಿದೆ. ಈ ನಾಟಿ ವೈದ್ಯ ಪದ್ಧತಿಯನ್ನು ಸ್ತ್ರೀ-ಪುರುಷರಿಬ್ಬರೂ ಸಹ ಕಲಿತಿರುತ್ತಾರೆ. ಹೆಚ್ಚಾಗಿ ಒಂದು ಮನೆಯಲ್ಲಿ ಪುರುಷನು ಕಲಿತಿದ್ದರೆ ಆತನ ಜೊತೆಯಲ್ಲಿಯೇ ಆತನ ಪತ್ನಿಯೂ ಸಹ ಕಲಿತಿರುತ್ತಾಳೆ. ಏಕೆಂದರೆ ಪುರುಷನು ಯಾವುದೋ ಕೆಲಸದ ನಿಮಿತ್ತ ಮನೆಯಿಂದ ಹೊರಗೆ ಹೋದರೆ ಊರಿನಲ್ಲಿ ಯಾರಿಗಾದರೂ ತೊಂದರೆಯಾದರೆ ಅಂತಹ ಸಂದರ್ಭದಲ್ಲಿ ಮನೆಯಲ್ಲಿರುವ ಮಹಿಳೆ ಚಿಕಿತ್ಸೆಯನ್ನು ನೀಡುತ್ತಾಳೆ. ಹಾಗಾಗಿ ಒಂದು ಮನೆಯಲ್ಲಿ ಸ್ತ್ರೀ-ಪುರುಷರಿಬ್ಬರೂ ಕಲಿತಿರುತ್ತಾರೆ.

ಈ ನಾಟಿ ವೈದ್ಯ ಪದ್ಧತಿಯು ಹಲವಾರು ವರ್ಷಗಳಿಂದಲೂ ಜನರಲ್ಲಿ ರೂಢಿಗತವಾಗಿ ಬೆಳೆದು ಬಂದಿರುವುದು ಕಂಡುಬರುತ್ತದೆ. ನಿಸರ್ಗದಲ್ಲಿ ದೊರೆಯುವ ಸಸ್ಯಗಳಿಂದ, ಗಿಡ ಮೂಲಿಕೆಗಳಿಂದ ಔಷಧಿಯನ್ನು ತಯಾರಿಸಿ ರೋಗಗಳನ್ನು ಗುಣಪಡಿಸಲಾಗುತ್ತದೆ. ಭಾರತದಲ್ಲಿ ೪೬೭೫ ಔಷಧಿ ಗಿಡಗಳ ಸಮುದಾಯಗಳನ್ನು ವಿವಿಧ ಪ್ರದೇಶಗಳಲ್ಲಿ ಅಂದರೆ ಆಯಾ ಪ್ರದೇಶದ ಹಿನ್ನೆಲೆಯಲ್ಲಿ ಉಪಯೋಗಿಸಲಾಗುತ್ತದೆ. ಸ್ಥಳೀಯವಾಗಿ ವಿವಿಧ ಹೆಸರುಗಳಿಂದ ಕರೆಯುತ್ತಾರೆ. ಅವುಗಳೆಂದರೆ ಆಯುರ್ವೇದ,

ಸಿದ್ಧ, ಯುನಾನಿ, ನಾಟಿ ಮುಂತಾದವು. ಭಾರತದಲ್ಲಿ ಆಯುರ್ವೇದ ಮತ್ತು ಹೋಮಿಯೋ ಪದ್ಧತಿಗೆ ಸರ್ಕಾರ ತುಂಬಾ ಪ್ರೋತ್ಸಾಹ ನೀಡುತ್ತದೆ. ಪ್ರಕೃತಿ ಚಿಕಿತ್ಸೆಯು ಆಯುರ್ವೇದದ ಒಂದು ಭಾಗ ಅಂತೆಯೇ ನೂರಾರು ಪರ್ಯಾಯ ಚಿಕಿತ್ಸೆಗಳಿವೆ. ಈ ನಾಟಿ ವೈದ್ಯಪದ್ಧತಿಗೆ ೨೦೦೦ವರ್ಷಗಳ ಹಿಂದಿನ ಇತಿಹಾಸವಿದೆ. ಇದರ ಇತಿಹಾಸಕಾರರೆಂದರೆ 'ಚರಕ' ಮತ್ತು 'ಶುಶ್ರುತರು'.

ಗ್ರಾಮೀಣ ಭಾಗದಲ್ಲಿ ಹೆಚ್ಚಾಗಿ ಮಹಿಳೆಯರು ನಾಟಿ ಔಷಧಿಯನ್ನು ನೀಡುವುದರಲ್ಲಿ ಪರಿಣಿತರಾಗಿರುತ್ತಾರೆ. ಕೆಲವು ಸಂದರ್ಭದಲ್ಲಿ ಮನೆಯಲ್ಲಿಯೇ ಔಷಧಿಯನ್ನು ತಯಾರಿಸಿ ರೋಗವನ್ನು ನಿವಾರಿಸಿಕೊಳ್ಳುತ್ತಾರೆ. ಅಂದರೆ ಒಂದು ಊರಿನಲ್ಲಿ ನಾಟಿ ವೈದ್ಯರು ಇದ್ದರೂ ಸಹ ಅವರ ಹತ್ತಿರ ಹೋಗದೇ ಮನೆಯಲ್ಲಿಯೇ ರೋಗ ನಿವಾರಿಸಿಕೊಳ್ಳುತ್ತಾರೆ. ಈ ಹಿಂದೆಯೇ ಹೇಳಿದಂತೆ ಮನೆಯಲ್ಲಿಯನ ವೈದ್ಯಕ್ಕೆ ಬೇಕಾದ ಔಷಧೀಯ ಸಸ್ಯಗಳನ್ನು ಅಡವಿಗೆ ಅಥವಾ ಅರಣ್ಯಕ್ಕೆ ತೆರಳಿ ತರಬೇಕಾಗುತ್ತದೆ. ಇದನ್ನು ಪುರುಷರು ಹೋಗಿ ತರುತ್ತಾರೆ. ಅಲ್ಲಿಂದ ತಂದ ಔಷಧೀಯ ಸಸ್ಯಗಳನ್ನು ಬಳಸಿ ರೋಗಗಳನ್ನು ವಾಸಿಮಾಡುತ್ತಾರೆ. ಈ ನಾಟಿ ವೈದ್ಯ ಪದ್ಧತಿಯಿಂದ ಯಾವುದೇ ಅಡ್ಡ ಪರಿಣಾಮಗಳು ಇರುವುದಿಲ್ಲ. ಹಾಗಾಗಿ ಪ್ರಸ್ತುತ ಸಂದರ್ಭದಲ್ಲಿ ಸಹ ಹೆಚ್ಚಾಗಿ ಜನರು ಈ ಪದ್ಧತಿಯ ಕಡೆ ವಾಲುತ್ತಿದ್ದಾರೆ.

ನಾಟಿ ವೈದ್ಯ ಪದ್ಧತಿಯಲ್ಲಿ ಮಹಿಳೆಯರು ತೊಡಗಿದಾಗ ಅವರು ತಮ್ಮದೇ ಆದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅಂದರೆ ಈ ಪದ್ಧತಿಯು ಕೇವಲ ಹವ್ಯಾಸವಾಗಿರುವುದರಿಂದ ಅದು ಜೀವನ ನಡೆಸಲು ಯಾವುದೇ ಸಹಾಯವನ್ನು ಮಾಡುವುದಿಲ್ಲ. ಏಕೆಂದರೆ ಗ್ರಾಮೀಣ ಭಾಗದಲ್ಲಿ ಈ ಚಿಕಿತ್ಸೆಯನ್ನು ನೀಡಿದಗೆ ಅದಕ್ಕೆ ಯಾವುದೇ ಫಲಾಪೇಕ್ಷೆ ಇರುವುದಿಲ್ಲ. ಆದರೆ ಇದನ್ನು ಅತ್ಯಂತ ಸಮರ್ಪಣಾ ಮನೋಭಾವದಿಂದ ಮಾಡಲಾಗುತ್ತದೆ. ಗ್ರಾಮೀಣ ಜನರಲ್ಲಿ ನಂಬಿಕೆ, ಆಚರಣೆ ಮತ್ತು ಸಂಪ್ರದಾಯಗಳು ಆರೋಗ್ಯದ ಬದುಕಿನೊಂದಿಗೆ ತಳುಕು ಹಾಕಿಕೊಂಡು ಸಾಗಿಬರುತ್ತಿದೆ. ಇಲ್ಲಿ ಮುಖ್ಯವಾಗಿ ಈ ವೈದ್ಯಕೀಯ ಪದ್ಧತಿಯನ್ನು ಒಂದು ವೃತ್ತಿಯನ್ನಾಗಿಸಿಕೊಂಡವರು ಆರ್ಥಿಕವಾಗಿ ಬಲಿಷ್ಟರಾಗಿರುತ್ತಾರೆ. ಆದರೆ ಹವ್ಯಾಸವಾಗಿ ನಾಟಿ ವೈದ್ಯವನ್ನು ಮಾಡಿದವರು ಆರ್ಥಿಕವಾಗಿ ಬಲಿಷ್ಟರಾಗಿರುವುದಿಲ್ಲ. ಏಕೆಂದರೆ ವೃತ್ತಿಯಾಗಿಸಿಕೊಂಡವರು ಚಿಕಿತ್ಸೆಗಾಗಿ ಹಣವನ್ನು ಪಡೆಯುತ್ತಾರೆ. ಆದರೆ ಹವ್ಯಾಸಿ ವೈದ್ಯರು ಚಿಕಿತ್ಸೆಗೆ ಹಣವನ್ನು ಅಪೇಕ್ಷಿಸುವುದಿಲ್ಲ. ಈ ನಾಟಿವೈದ್ಯ ಪದ್ಧತಿಯಲ್ಲಿ ಮೇಲ್ವರ್ಗದ ಮಹಿಳೆಯರು ಕಂಡುಬಂದರು ಸಹ ಹೆಚ್ಚಾಗಿ ತಳ ಸಮುದಾಯದ ಅಥವಾ ಕೆಳವರ್ಗದ ಹಾಗೂ ಮಧ್ಯಮ ವರ್ಗದ ಸಮುದಾಯಗಳಲ್ಲಿ ಕಂಡುಬರುತ್ತದೆ. ಮುಖ್ಯವಾಗಿ ನಾಟಿ ಔಷಧಿಯನ್ನು ನೀಡುವವರು ತಾವು ಯಾವ ಯಾವ ಗಿಡಮೂಲಿಕೆಗಳನ್ನು ಬಳಸುತ್ತಾರೆ ಎಂಬುದನ್ನು ಹೇಳುವುದಿಲ್ಲ. ಏಕೆಂದರೆ ಹೇಳಿದರೆ ಚಿಕಿತ್ಸೆ ಫಲಿಸುವುದಿಲ್ಲ ಎಂಬ ನಂಬಿಕೆ ರೂಢಿಯಲ್ಲಿದೆ.

### ೧.೧. ಅಧ್ಯಯನದ ಉದ್ದೇಶಗಳು

ಆಧುನೀಕರಣದ ಇಂದಿನ ಸಂದರ್ಭದಲ್ಲಿ ವೈಜ್ಞಾನಿಕತೆಯಿಂದಾಗಿ ಮಾಹಿತಿ ತಂತ್ರಜ್ಞಾನಗಳು ಸಾಕಷ್ಟು ಬೆಳೆದಿದ್ದರೂ ಸಹ ಗ್ರಾಮೀಣ ಭಾಗದಲ್ಲಿ ಇವುಗಳು ಯಾವುವೂ ಕೂಡ ತಲುಪದೇ ಇರುವುದು ಕಂಡುಬರುತ್ತದೆ.

ಇತ್ತೀಚಿಗೆ ಗ್ರಾಮೀಣ ಭಾಗದ ಜನರು ಆಧುನಿಕ ವೈದ್ಯಕೀಯ ಪದ್ಧತಿಗೆ ಮೊರೆಹೋಗುವುದರ ಜೊತೆ ಜೊತೆಗೆ ಸಾಂಪ್ರದಾಯಿಕ ವೈದ್ಯಕೀಯ ಪದ್ಧತಿಯಾಗಿರುವ ನಾಟಿವೈದ್ಯ ಪದ್ಧತಿಯಲ್ಲಿಯೂ ಸಹ ನಂಬಿಕೆಯನ್ನು ಹೊಂದಿದ್ದಾರೆ. ಮುಖ್ಯವಾಗಿ ನಗರ ಪ್ರದೇಶಗಳಿಂದ ದೂರವಿರುವಂತಹ ಗ್ರಾಮೀಣ ಭಾಗದ ಜನರು ಹೆಚ್ಚಾಗಿ ಈ ನಾಟಿ ವೈದ್ಯರಾಗಿ ಪುರುಷರು ಮತ್ತು ಮಹಿಳೆಯರು ಕಂಡುಬರುತ್ತಾರೆ. ಪ್ರಧಾನವಾಗಿ ಪುರುಷರು ಹೆಚ್ಚಾಗಿ ಕಂಡುಬರುತ್ತಾರೆ. ಸ್ತ್ರೀಯರು ಪ್ರಧಾನ ನೆಲೆಗೆ ಕಂಡುಬರುವುದಿಲ್ಲ. ಕೇವಲ ಇವರು ಪುರುಷರಿಗೆ ಸಹಾಯಕರಾಗಿ ಮುಂದುವರಿದುಕೊಂಡೇ ಬಂದಿದ್ದಾರೆ. ಪುರುಷಶಾಹಿ ಚಿಂತನೆಯ ಮೂಲ ಉದ್ದೇಶವಾದ ಮಹಿಳೆಗೆ ಇರುವಂತಹ ಎರಡನೆ ದರ್ಜೆಯ ಸ್ಥಾನದಲ್ಲಿಯೇ ಇರಬೇಕು ಎಂಬುದಾಗಿರುವುದರಿಂದ ಮಹಿಳೆಯನ್ನು ಪ್ರಧಾನ ನೆಲೆಗೆ ತೋರ್ಪಡಿಸುತ್ತಿಲ್ಲ.

ನಾಟಿ ವೈದ್ಯ ಪದ್ಧತಿಯಲ್ಲಿ ಮಹಿಳೆಯರು ಪ್ರಮುಖ ಪಾತ್ರವನ್ನು ವಹಿಸಿದರೂ ಕೂಡ ಅವರಿಗೆ ಸಿಗಬೇಕಾದ ಪ್ರತಿಫಲ ಸಿಗುತ್ತಿಲ್ಲ. ಇಂದಿಗೂ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಗೆ ಮತ್ತು ಮಕ್ಕಳಿಗೆ ಸಂಬಂಧಿಸಿದ ಪ್ರತಿಯೊಂದು ಕಾಯಿಲೆಗಳಿಗೂ ಕೂಡ ನಂಬಿಕೆಗಳಿರುವುದು ಕಂಡುಬರುತ್ತದೆ. ಈ ನಂಬಿಕೆಗಳೆಲ್ಲವೂ ಕೂಡ ಧರ್ಮದ ಹಿನ್ನೆಲೆಯನ್ನು ಹೊಂದಿದ್ದು ಈ ನಂಬಿಕೆಗಳನ್ನು ಪಾಲಿಸುವವರು ಮಹಿಳೆಯರೇ ಆಗಿರುತ್ತಾರೆ. ಇದರಿಂದಾಗಿ ಮಹಿಳೆಯರು ಮತ್ತೆ ಸಂಪ್ರದಾಯ ಪದ್ಧತಿಗಳನ್ನು ಆಚರಿಸುತ್ತಾ ಅಧೀನ ನೆಲೆಗೆ ತಳ್ಳಲ್ಪಡುತ್ತಿದ್ದಾರೆ. ನಾಟಿ ವೈದ್ಯ ಪದ್ಧತಿಯ ಚಿಕಿತ್ಸೆಯಿಂದ ಮಹಿಳೆಯರು ಹಲವಾರು ಪ್ರಯೋಜನಗಳನ್ನು ಪಡೆಯುತ್ತಿದ್ದಾರೆ. ಹಾಗೆಯೇ ದುಷ್ಪರಿಣಾಮಗಳನ್ನು ಸಹ ಎದುರಿಸುತ್ತಿದ್ದಾರೆ. ಈ ನಿಟ್ಟಿನಲ್ಲಿ ಅಧ್ಯಾಯನವು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧. ನಾಟಿವೈದ್ಯ ಪದ್ಧತಿಯಲ್ಲಿ ಮಹಿಳೆಯರ ಪಾತ್ರವೇನು ಎಂಬುದನ್ನು ತಿಳಿಯುವುದು.

೨. ನಾಟಿ ವೈದ್ಯ ಪದ್ಧತಿಯನ್ನು ಅವಲಂಬಿಸಿದ ಮಹಿಳೆಯರ ಜೀವನದ ಸ್ಥಿತಿ ಗತಿಗಳು ಹೇಗಿವೆ ಎಂಬುದನ್ನು ಅರಿಯುವುದು.

೩. ಜಾಗತೀಕರಣದ ಸಂದರ್ಭದಲ್ಲಿ ಈ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವ ಮಹಿಳೆಯರು ಎದುರಿಸುತ್ತಿರುವ ಸವಾಲುಗಳೇನು ಎಂಬುದನ್ನು ತಿಳಿಯುವುದು.

೪. ವ್ಯವಸ್ಥೆಯಲ್ಲಿ ನಾಟಿ ವೈದ್ಯಳನ್ನು ನೋಡುವ ದೃಷ್ಟಿಕೋನ ಎಂತಹದ್ದು ಮತ್ತು ಅವರಿಗೆ ಸಮಾಜದಲ್ಲಿ ಇರುವ ಸ್ಥಾನಮಾನಗಳೇನು ಎಂಬುದನ್ನು ತಿಳಿಯುವುದು.

೫. ಆಧುನಿಕ ವೈದ್ಯ ಪದ್ಧತಿಗೂ ಮತ್ತು ನಾಟಿ ವೈದ್ಯಪದ್ಧತಿಗೂ ಇರುವಂತಹ ವ್ಯತ್ಯಾಸಗಳೇನು ಎಂಬುದನ್ನು ತಿಳಿಯುವುದು.

೬. ನಾಟಿ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವವರಿಗೆ ಸರ್ಕಾರದಿಂದ ಪ್ರಯೋಜನಗಳೇನಾದರೂ ದೊರೆತಿದೆಯೇ ಎಂಬುದನ್ನು ತಿಳಿಯುವುದು.

೭. ನಾಟಿ ವೈದ್ಯ ಪದ್ಧತಿಯಿಂದ ಸಮಾಜಕ್ಕೆ ಕೊಡುಗೆ ಏನು ಅಥವಾ ಈ ಪದ್ಧತಿಯು ಜನರಿಗೆ ಪೂರಕವೇ ಅಥವಾ ಮಾರಕವೋ ಎಂಬುದನ್ನು ತಿಳಿಯುವುದು.

೮. ಈ ಔಷಧೀ ಪದ್ಧತಿಯು ಶಾಶ್ವತವಾಗಿ ಮತ್ತು ಪರಿಣಾಮಕಾರಿಯಾಗಿ ಉಳಿಯಲು ಯಾವ ಕ್ರಮಗಳನ್ನು ಕೈಗೊಳ್ಳಬೇಕು ಎಂಬುದನ್ನು ತಿಳಿಸುವುದು.

## ೧.೨. ಅಧ್ಯಯನದ ವ್ಯಾಪ್ತಿ

ಹೈದ್ರಾಬಾದ್ ಕರ್ನಾಟಕ ಪ್ರದೇಶವಾದ ರಾಯಚೂರು ಜಿಲ್ಲೆಯು ಅತ್ಯಂತ ಹಿಂದುಳಿದ ಪ್ರದೇಶವಾಗಿದ್ದು, ಇಲ್ಲಿನ ಜನರ ಜೀವನ ಪರಿಸ್ಥಿತಿಗಳೂ ಸಹ ಚಿಂತಾಜನಕವಾಗಿದೆ. ರಾಯಚೂರು ಜಿಲ್ಲೆಯಲ್ಲಿನ ಒಂದು ತಾಲ್ಲೂಕಾದ ಮಾನ್ವಿಯೂ ಸಹ ಅಭಿವೃದ್ಧಿಯ ಪಥದತ್ತ ಸಾಗುತ್ತಿದ್ದು, ಇಲ್ಲಿನ ಜನರ ಜೀವನವೂ ಸಹ ಅಭಿವೃದ್ಧಿಯ ಪಥದಲ್ಲಿ ಸಾಗುತ್ತಿದೆ ಎಂದು ಹೇಳಲಾಗುತ್ತಿದ್ದರೂ ಸಹ ವಾಸ್ತವದಲ್ಲಿ ಜನರ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸ್ಥಿತಿಗತಿಗಳು ತುಂಬಾ ಕೆಳಹಂತದಲ್ಲಿರುವುದು ಕಂಡುಬರುತ್ತದೆ. ಇವರು ಹಲವಾರು ಸಮಸ್ಯೆಗಳಿಂದ ಬಳಲುತ್ತಿದ್ದಾರೆ. ಈ ಭಾಗದ ಮಹಿಳೆಯರು ಇಂದು ಹೆಚ್ಚಾಗಿ ಮಹಿಳಾ ಸಂಘಗಳನ್ನು ಕಟ್ಟಿಕೊಳ್ಳುವುದರ ಮೂಲಕ ಅಭಿವೃದ್ಧಿಯ ಕಡೆ ಚಲಿಸುತ್ತಿದ್ದಾರೆ. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ನಾಟಿ ಔಷಧಿಯನ್ನು ತಯಾರಿಸಿ ಬೇರೆ ಬೇರೆ ಊರುಗಳಿಗೆ, ರಾಜ್ಯಗಳಿಗೆ ಮಾರಲು ಹೋಗುತ್ತಾರೆ. ಆದರೆ ಅವರು ಬೇರೆ ಬೇರೆ ಔಷಧಿ ಪದ್ಧತಿಗಳಿಗೆ ಪೈಪೋಟಿಯನ್ನು ನೀಡುವಷ್ಟು ಬೆಳೆದಿಲ್ಲ. ಹಾಗಾಗಿ ಅಧ್ಯಯನದ ವಿಷಯ ವಸ್ತುವಾಗಿ "ನಾಟಿ ವೈದ್ಯ ಪದ್ಧತಿ ಮತ್ತು ಮಹಿಳೆಯರು" ಎಂಬುದನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಂಡಿದ್ದು ಅಧ್ಯಯನದ ವ್ಯಾಪ್ತಿಯನ್ನು ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿಗೆ ಸೀಮಿತಗೊಳಿಸಿಕೊಳ್ಳಲಾಗಿದೆ.

## ೧.೩. ಅಧ್ಯಯನದ ವೈಧಾನಿಕತೆ

ಹಿಂದಿನಿಂದಲೂ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯನ್ನು ಎರಡನೇ ದರ್ಜೆಯ ಸ್ಥಾನದಲ್ಲಿ ನೋಡುತ್ತಿರುವುದು ಕಂಡುಬರುತ್ತಿದೆ. ಮುಖ್ಯವಾಗಿ ಮಹಿಳೆಯರ ದುಡಿಮೆಯನ್ನು ಪ್ರಧಾನ ವಾಹಿನಿಗೆ ತರಲೇಬಾರದು ಎಂಬ ಪುರುಷ ಚಿಂತನೆಯಾಗಿರುವುದರಿಂದ ಮಹಿಳೆಯರ ದುಡಿಮೆ ನಗಣ್ಯವಾಗಿದೆ. ಎಲ್ಲಾ ರಂಗದಲ್ಲೂ ಕೂಡ ಮಹಿಳೆಯರ ಸ್ಥಿತಿ ಇದೇ ಆಗಿದೆ. ಈ ನಿಟ್ಟಿನಲ್ಲಿ ಯಾವ ಯಾವ ರಂಗದಲ್ಲಿ ಮಹಿಳೆಯರು ಅಧೀನ ನೆಲೆಗೆ ತಳ್ಳಲ್ಪಟ್ಟಿದ್ದಾರೆ ಎಂಬುದನ್ನು ಅರಿಯಬೇಕಾದರೆ ಸಂಶೋಧನೆಯು ಪ್ರಮುಖವಾಗುತ್ತದೆ. ಹಾಗಾಗಿ ಪ್ರಸ್ತುತ ಅಧ್ಯಾಯನವು ನಾಟಿ ವೈದ್ಯ ಪದ್ಧತಿ ಮತ್ತು ಮಹಿಳೆಯರು ಎಂಬ ವಿಷಯವಾಗಿದ್ದು ಹೆಚ್ಚಾಗಿ ಕ್ಷೇತ್ರಕಾರ್ಯದ ಮಾಹಿತಿಯನ್ನು ಪ್ರಥಮ ಆಕರವಾಗಿ ಬಳಸಿಕೊಳ್ಳಲಾಗಿದೆ. ಈ ಸಂದರ್ಭದಲ್ಲಿ ಸಂದರ್ಶನ, ಅವಲೋಕನ, ರಚಿತ ಮತ್ತು ಅರಚಿತ ಪ್ರಶ್ನಾವಳಿಗಳನ್ನು ಅಳವಡಿಸುವುದರ ಮೂಲಕ ಮತ್ತು ಗುಣಾತ್ಮಕ ಹಾಗೂ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಹಾಗೂ ಆಕರ ಗ್ರಂಥಗಳು ಮತ್ತು ಪತ್ರಿಕಾ ಪ್ರಕಟಣೆಗಳನ್ನು ಪೂರಕಮಾಹಿತಿಗಾಗಿ ಬಳಸಿಕೊಂಡು ಅಧ್ಯಯನವನ್ನು ನಡೆಸಲಾಗಿದೆ.

## ೧.೪. ಅಧ್ಯಯನದ ಸ್ವರೂಪ

"ನಾಟಿ ವೈದ್ಯ ಪದ್ಧತಿ ಮತ್ತು ಮಹಿಳೆಯರು" ಎಂಬ ವಿಷಯದ ಮೇಲೆ ಸಂಶೋಧನೆಯನ್ನು

ಕೈಗೊಂಡು ಅಧ್ಯಯನದ ಅನುಕೂಲಕ್ಕಾಗಿ ವಿಷಯ ವಸ್ತುವನ್ನು ಐದು ಅಧ್ಯಾಯಗಳಲ್ಲಿ ವಿವರಿಸಲಾಗುವುದು.

ಮೊದಲನೆಯ ಅಧ್ಯಾಯವು ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಧ್ಯಯನದ ವೈಧಾನಿಕತೆ ಮತ್ತು ಸ್ವರೂಪಗಳನ್ನು ಒಳಗೊಂಡು ಸಂಶೋಧನೆಯ ಸ್ಥೂಲ ವಿವರಣೆಯನ್ನು ನೀಡಲಾಗುವುದು.

ಎರಡನೆಯ ಅಧ್ಯಾಯವು ನಾಟಿ ವೈದ್ಯ ಪದ್ಧತಿಯ ಉಗಮ, ಅದು ಬೆಳೆದು ಬಂದ ದಾರಿ ಮತ್ತು ಈ ನಾಟಿ ವೈದ್ಯ ಪದ್ಧತಿಯಲ್ಲಿ ಮಹಿಳೆಯರ ಭಾಗವಹಿಸುವಿಕೆಯ ಬಗ್ಗೆ ಹಾಗೂ ಈ ಪದ್ಧತಿಯಲ್ಲಿನ ಮಹಿಳೆಯರ ಆರ್ಥಿಕ, ಸಾಮಾಜಿಕ, ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತಿಗತಿಗಳ ಬಗ್ಗೆ ವಿವರಣೆಯನ್ನು ನೀಡಲಾಗುವುದು.

ಮೂರನೆಯ ಅಧ್ಯಾಯವು ರೋಗ ಮತ್ತು ನಿವಾರಣಾ ವಿಧಾನಗಳಿಗೆ ಸಂಬಂಧಿಸಿದ್ದಾಗಿದ್ದು, ಗ್ರಾಮೀಣ ಭಾಗದಲ್ಲಿ ಕಂಡುಬರುವ ರೋಗಗಳಿಗೆ ಇರುವಂತಹ ನಂಬಿಕೆಗಳು ಯಾವುವು ಎಂಬುದನ್ನು ಮತ್ತು ಮಹಿಳೆ ಮತ್ತು ಮಕ್ಕಳಿಗೆ ಸಂಬಂಧಿಸಿದ ಕಾಯಿಲೆಗಳು ಯಾವುವು ಹಾಗೂ ಆ ಕಾಯಿಲೆಗಳನ್ನು ನಿವಾರಿಸಿಕೊಳ್ಳಲು ಹೇಗೆ ಆರೈಕೆಯನ್ನು ಮಾಡಬೇಕು ಎಂಬಂತಹ ವಿಷಯಗಳನ್ನು ಕ್ಷೇತ್ರಕಾರ್ಯದಲ್ಲಿ ಕಂಡುಕೊಂಡ ವಿಷಯಗಳನ್ನು ಆಧರಿಸಿ ವಿವರಿಸಿಲಾಗುವುದು.

ನಾಲ್ಕನೆಯ ಅಧ್ಯಾಯವು ಈ ನಾಟಿ ವೈದ್ಯ ಪದ್ಧತಿಯ ಕುರಿತು ಸ್ತ್ರೀವಾದಿಗಳು ಏನು ಹೇಳುತ್ತಾರೆ ಎಂಬುದರ ಜೊತೆಗೆ ವಿಮರ್ಶೆಯನ್ನು ಮಾಡಲಾಗಿದೆ.

ಐದನೆಯ ಅಧ್ಯಾಯವು ಸಮಾರೋಪವಾಗಿದ್ದು ಅಧ್ಯಯನದಿಂದ ಕಂಡುಕೊಂಡ ಫಲಿತಗಳು ಯಾವುವು ಮತ್ತು ಅವುಗಳ ಸಲಹೆಗಳನ್ನು ಕೊಡಲಾಗುವುದು.

## ಅಧ್ಯಾಯ-೨

# ನಾಟಿವೈದ್ಯ ಪದ್ಧತಿಯಲ್ಲಿ ಮಹಿಳೆಯರು

೨.೧. ನಾಟಿವೈದ್ಯ ಪದ್ಧತಿ ಬೆಳೆದು ಬಂದ ಬಗೆ

೨.೨. ನಾಟಿವೈದ್ಯ ಪದ್ಧತಿಯಲ್ಲಿ ಮಹಿಳೆಯರು

೨.೩. ನಾಟಿವೈದ್ಯ ಪದ್ಧತಿಯಲ್ಲಿನ ಮಹಿಳೆಯರ ಜೀವನ ಸ್ಥಿತಿಗತಿಗಳು

೨.೩.೧. ಸಾಮಾಜಿಕ ಸ್ಥಿತಿಗತಿಗಳು

೨.೩.೨. ಆರ್ಥಿಕ ಸ್ಥಿತಿಗತಿಗಳು

೨.೩.೩. ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತಿಗತಿಗಳು

# ಅಧ್ಯಾಯ ೨

# ನಾಟಿವೈದ್ಯ ಪದ್ಧತಿಯಲ್ಲಿ ಮಹಿಳೆಯರು

ಭಾರತೀಯ ಸಾಮಾಜಿಕ ಚಿಂತನೆಯು ಅತ್ಯಂತ ಪ್ರಾಚೀನವಾದುದು. ವೇದಗಳ ಕಾಲಕ್ಕಿಂತ ಹಿಂದಿನಿಂದಲೂ ಸಾಮಾಜಿಕ ಕಲ್ಪನೆ, ಬೆಳವಣಿಗೆ ಹೊಂದಿರುವುದೆಂದು ಗುರುತಿಸಲಾಗಿದೆ. ಹೀಗಾಗಿ ಭಾರತೀಯ ಸಾಮಾಜಿಕ ಚಿಂತನೆಯು ಒಬ್ಬ ನಿರ್ದಿಷ್ಟ ವ್ಯಕ್ತಿಯಿಂದ, ನಿರ್ದಿಷ್ಟವಾದ ಜ್ಞಾನದ ಶಾಖೆಯಾಗಿ ರೂಪಿತವಾಗಿಲ್ಲ. ಮಾನವ ಎಷ್ಟೋ ಮಿಲಿಯನ್ ವರ್ಷಗಳ ಹಿಂದೆ ಈ ಭೂಮಿಯ ಮೇಲೆ ಹುಟ್ಟಿದ. ಅವನು ಅಂದಿನಿಂದ ಇಂದಿನವರೆಗೆ ನಡೆದು ಬಂದ ದಾರಿಯನ್ನು ಅವಲೋಕಿಸಿದರೆ ಅವನ ಬೆಳವಣಿಗೆಯ ಬಗೆಗೆ ಅಚ್ಚರಿವುಂಟಾಗುತ್ತದೆ. ಇಂದಿನ ಈ ವಿಜ್ಞಾನ ಯುಗದಲ್ಲಿ, ತಾಂತ್ರಿಕ ಜಗತ್ತಿನಲ್ಲಿ ಮನುಷ್ಯನ ಆಶೋತ್ತರಗಳು ಗಗನಕ್ಕೇರಿವೆ. ಅಷ್ಟಲ್ಲದೆ ಅಭಿವೃದ್ಧಿಯನ್ನು ಸಾಧಿಸಿ ಪ್ರಕೃತಿಯನ್ನೇ ಕೈವಶ ಮಾಡಿಕೊಳ್ಳುವ ಗುರಿಯತ್ತ ತೀವ್ರವಾಗಿ ಧಾವಿಸುತ್ತಿದ್ದಾನೆ. ಆದರೆ ಮಾನವ ತನ್ನ ಲೌಕಿಕ ಸುಖಕ್ಕೋಸ್ಕರ ಪ್ರಕೃತಿಯನ್ನೇ ಹಾಳುಮಾಡುತ್ತಿದ್ದಾನೆ. ವಿಜ್ಞಾನ, ತಾಂತ್ರಿಕತೆಯ ಹೆಸರಿನಲ್ಲಿ ಬೌದ್ಧಿಕ, ತಾತ್ವಿಕ ಮೌಲ್ಯಗಳನ್ನು ಮೂಲೆಗುಂಪಾಗಿಸುತ್ತಿದ್ದಾನೆ ಎಂದು ಭಾಸವಾಗುತ್ತದೆ. ಮಾನವನ ಮೂಲ, ವಿಕಾಸಗಳನ್ನು ಅದರಲ್ಲೂ ವಿಶೇಷವಾಗಿ ದೈಹಿಕ, ಆರೋಗ್ಯ, ರೋಗ-ರುಜಿನಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಬೆಳವಣಿಗೆಗಳನ್ನು ಗಮನಿಸುವುದು ಅವಶ್ಯಕವಾಗಿದೆ. ಹಾಗಾಗಿ ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳಲು ಯಾವ ಯಾವ ವಿಧಾನಗಳನ್ನು ಅನುಸರಿಸಿದನು ಮತ್ತು ಅದನ್ನು ಹೇಗೆ ವಶಪಡಿಸಿಕೊಂಡನು ಎಂಬ ವಿಷಯಗಳನ್ನು ತಿಳಿಯುವುದು ಸೂಕ್ತವೆನಿಸುತ್ತದೆ. ಈ ನಿಟ್ಟಿನಲ್ಲಿ ತನ್ನ ಆರೋಗ್ಯವನ್ನು ಕಾಪಾಡಿಕೊಳ್ಳುವುದರ ಸಲುವಾಗಿ ನಾಟಿವೈದ್ಯಪದ್ಧತಿಯನ್ನು ಅನುಸರಿಸುವುದೂ ಕಂಡುಬರುತ್ತದೆ. ಹಾಗಾಗಿ ಈ ನಾಟಿ ವೈದ್ಯ ಪದ್ಧತಿಯು ಬೆಳೆದು ಬಂದ ಬಗೆಯನ್ನು ಮೊದಲು ನಾವು ನೋಡಬೇಕಾಗಿದೆ.

## ೨.೧. ನಾಟಿವೈದ್ಯ ಪದ್ಧತಿ ಬೆಳೆದು ಬಂದ ಬಗೆ

ಮನುಷ್ಯ ಮೂಲತಃ ಅನ್ವೇಷಣಾಶೀಲ ಪ್ರಾಣಿ ತನ್ನ ಸುತ್ತಲಿನ ಪ್ರಪಂಚವನ್ನು ಗಮನಿಸುತ್ತ,

ಅದರ ಬಗೆಗೆ ಅಸಾಧ್ಯ ಕುತೂಹಲವನ್ನು ಬೆಳೆಸಿಕೊಳ್ಳುತ್ತ ಅದರ ಬಗ್ಗೆ ಹೆಚ್ಚು ಹೆಚ್ಚು ತಿಳಿದುಕೊಳ್ಳುವ, ಅದನ್ನು ಶೋಧಿಸುವ ಅವನ ಪ್ರವೃತ್ತಿ ಸಹಜವಾದುದೇ ಸರಿ. ಈ ತರಹದ ಪ್ರವೃತ್ತಿಯನ್ನು ಚಿಕ್ಕ ಮಗುವಿನಲ್ಲೂ ಗಮನಿಸಬಹುದಾಗಿದೆ. ನಮ್ಮ ಪೂರ್ವಜರು, ಋಷಿಮುನಿಗಳು ಈ ಪ್ರವೃತ್ತಿಯನ್ನು ವಿಶಿಷ್ಟ ಬಗೆಯಲ್ಲಿ ಬೆಳೆಸಿಕೊಂಡು ಪ್ರಪಂಚವನ್ನು, ಲೌಕಿಕ ಜಗತ್ತನ್ನು ತಮ್ಮ ಪರಿಶೋಧಕ ದೃಷ್ಟಿಯಿಂದ ವಿಕ್ಷೀಸಿದ್ದಲ್ಲದೆ, ತಮ್ಮನ್ನು ತಮ್ಮ ಅಂತರಂಗವನ್ನು ಒಳಹೊಕ್ಕು ಪರಿಶೀಲಿಸುವ ಸಾಹಸ ಮಾಡಿದರು. ಈ ಅಂತರಂಗ ಮತ್ತು ಬಹಿರಂಗಗಳ ಅಗಾಧ ಜ್ಞಾನ ಭಂಡಾರ ಭಾರತದ ಸಾಂಸ್ಕೃತಿಕ, ವೈಜ್ಞಾನಿಕ ಬೆಳವಣಿಗೆಯ ಮೂಲವಸ್ತು. ಆದರೆ ಈ ಜ್ಞಾನ ಸಂಪತ್ತು ಯಾವಾಗಲೂ ಪರರ ಕಲ್ಯಾಣಕ್ಕೋಸ್ಕರ, ಹಿತಕ್ಕೋಸ್ಕರ ಮೀಸಲಾಗಿತ್ತು. ನಮ್ಮ ಪೂರ್ವಜರಿಗೆ ಈ ಜ್ಞಾನದ ಸಂಗ್ರಹ, ಪರಿಶೋಧನೆಯ ಪ್ರವೃತ್ತಿ ಹೆಚ್ಚು ಹೆಚ್ಚು ಅರಿಯಬೇಕೆಂಬ ಆಕಾಂಕ್ಷೆಯೇ ಸಹಜವಾಗಿ ಮನುಷ್ಯನು ಶರೀರ, ಮನಸ್ಸಿನ ಬಗ್ಗೆ ಅವುಗಳ ಆರೋಗ್ಯದ ಬಗ್ಗೆ, ಅನಾರೋಗ್ಯದ ಬಗೆಗೆ ಚಿಂತನೆ ಮಾಡಲು ಈ ಜ್ಞಾನ ಪ್ರೇರೇಪಿಸಿರಬಹುದು. ಮನುಷ್ಯನ ಹುಟ್ಟಿದಂದಿನಿಂದಲೇ ಅವನ ಜೊತಗೇ ಬೆಳೆದುಕೊಂಡು ಬಂದುದು ಅನಾರೋಗ್ಯ. ಆದಿ ಮಾನವನಲ್ಲೂ ಆರೋಗ್ಯ ಮತ್ತು ಅನಾರೋಗ್ಯದ ಒಂದು ಕಲ್ಪನೆ ಇದ್ದಿರಲೂ ಸಾಕು. ಅದು ಎಷ್ಟೇ ಪ್ರಾಥಮಿಕ ಕಲ್ಪನೆಯಾಗಿರಲಿ ಅವನ ನಿತ್ಯದ ಚಟುವಟಿಕೆಗಳಲ್ಲಿ ಬಹುಶಃ ಆಹಾರ, ಲೈಂಗಿಕ ಕ್ರಿಯೆ, ಸ್ವರಕ್ಷಣೆ ಇತ್ಯಾದಿ ಮೂಲಭೂತ ಪ್ರಕ್ರಿಯೆಗಳಲ್ಲಿ ಶಾರೀರಿಕ ಭಾದೆ ಉಂಟಾದಾಗ ಅವನಿಗೆ ರೋಗದ, ನೋವಿನ ಕಲ್ಪನೆ ಆಗಿರಲೇಬೇಕು. ಇದೇ ಈ ಮೂಲಭೂತ ಪರಿಕಲ್ಪನೆಯೇ ಆರೋಗ್ಯಶಾಸ್ತ್ರದ, ವೈದ್ಯ ಶಾಸ್ತ್ರದ ತಳಹದಿಗೆ ಕಾರಣವಾಗಿರಬಹುದು ಎಂದು ಹೇಳಬಹುದಾಗಿದೆ.

ಮೊದಲೇ ಹೇಳಿದಂತೆ ಆದಿಮಾನವನ ದೈನಂದಿನ ಚಟುವಟಿಕೆಗಳಲ್ಲಿ ವ್ಯತ್ಯಯ ಉಂಟಾದಾಗ ಅಂದರೆ ಆಕಸ್ಮಿಕವಾಗಿ ಬಿದ್ದು, ಪ್ರಾಣಿಗಳು ಕಚ್ಚಿ, ಪರಸ್ಪರರಲ್ಲಿ ಕಾದಾಟ ನಡೆದಾಗ ಗಾಯ ಉಂಟಾದಾಗ, ಶಾರೀರಿಕ ಅನಾರೋಗ್ಯ ಉಂಟಾದಾಗ ಸ್ವಾಭಾವಿಕವಾಗಿಯೇ ಅವನಿಗೆ ಬೇಟೆ ಆಡಲು ಆಹಾರ ಸಂಗ್ರಹಿಸಲು, ಓಡಲು, ನಡೆಯಲು, ತೊಂದರೆಯಾಗಿರಬಹುದು, ಸ್ವಾಭಾವಿಕವಾಗಿಯೇ ಈ ವ್ಯತ್ಯಯಗಳನ್ನು ನಿವಾರಿಸಲು ಏನಾದರೂ ಉಪಾಯವನ್ನು ಯೋಚಿಸಿರಲೂಬಹುದು. ಏಕೆಂದರೆ ಭಯಂಕರ ಕಾಡಿನ ಮಧ್ಯೆ ಅಷ್ಟೇ ಭಯಂಕರ ಕಾಡುಪ್ರಾಣಿಗಳ ನಡುವೆ ಈ ಪ್ರತಿರೋಧಾತ್ಮಕ ಪರಿಸರದಲ್ಲಿ ಜೀವದಿಂದ ಇರಬೇಕಾದರೆ ಬಲಶಾಲಿಯಾಗಿರುವುದೂ ನಿರೋಗಿಯಾಗಿರುವುದೂ ಮುಖ್ಯ ಹಾಗೂ ಅನಿವಾರ್ಯ. ಹೀಗಾಗಿ ತನ್ನ ನೋವು ನಿವಾರಣೆಗಾಗಿ ಅವನು ಏನಾದರೂ ಪ್ರಯತ್ನ ಮಾಡಿರಲೇಬೇಕು. ಉದಾಹರಣೆಗಾಗಿ ಗಾಯದ ಮೇಲೆ ಎಲೆ ಇರಿಸುವುದು, ಎಲೆ ಜಜ್ಜಿ ರಸ ಹಾಕಿಕೊಳ್ಳುವುದು, ಸುತ್ತಲಿನ ಗಿಡ ಬಳ್ಳಿಗಳನ್ನೇ ಉಪಯೋಗಿಸಿ ತನ್ನ ರೋಗ ಪರಿಹಾರ ಮಾಡಿಕೊಂಡಿರುವ ಸಾಧ್ಯತೆಗಳೇ ಹೆಚ್ಚು. ಇವೇ ಪ್ರಯತ್ನಗಳೇ ನಿಧಾನವಾಗಿ ಕ್ರಮೇಣ ಒಂದು ನಿರ್ದಿಷ್ಟ ಜ್ಞಾನಕ್ಕೆ ಅವಕಾಶ ಮಾಡಿಕೊಟ್ಟಿದೆ. ಆದರೆ ಈ ಜ್ಞಾನದ ಉಗಮ ಒಂದೇ ದಿನದಲ್ಲಿ ಒಂದೇ ವರ್ಷದಲ್ಲಿ ಆಗಲಿಲ್ಲ. ನೂರಾರು ವರ್ಷಗಳ ಸ್ವಾನುಭವ ಪ್ರಕ್ರಿಯೆಯ ನಂತರ ಆ ಜ್ಞಾನಕ್ಕೆ ಒಂದು ಖಚಿತತೆ ಉಂಟಾಗಿದೆ. ಇಂಥಹ ಒಂದು ಪ್ರಾಥಮಿಕ ಜ್ಞಾನವೇ ಮುಂದೆ ಮನುಷ್ಯನನ್ನು ಹೆಚ್ಚು ಹೆಚ್ಚು ಅರಿಯಲು, ಒಳಹೊಕ್ಕು ಶೋಧಿಸಲು

ಪ್ರೇರೇಪಿಸಿತು. ಅದೇನಿದ್ದರೂ ಈ ಪರಿಶೋಧನೆಗೆ ಅವನ ಸುತ್ತಲಿನ ಪ್ರಕೃತಿಯೇ ಕೇಂದ್ರಬಿಂದು. ಅವನು ಪ್ರಕೃತಿಯಿಂದಲೇ ತನ್ನ ರೋಗರುಜಿನಗಳಿಗೆ ಪರಿಹಾರಕಂಡುಕೊಂಡ. ಇಂತಹ ರೋಗಕ್ಕೆ ಈ ಎಲೆಯ ರಸ ಈ ಗಿಡದ ತೊಗಟೆ, ಆ ನೋವಿಗೆ ಈ ಬೇರಿನ ಕಷಾಯ, ಗಾಯಕ್ಕೆ ಈ ಕಾಂಡದ ಕಲ್ಕ.....ಹೀಗೆ ಮುಂತಾಗಿ ಸಂಶೋಧಿಸಿದನು. ಈ ಜ್ಞಾನವೇ ಮುಂದೆ ನಾಟಿ ವೈದ್ಯಶಾಸ್ತ್ರವಾಗಿ, ಆಯುರ್ವೇದ ಶಾಸ್ತ್ರವಾಗಿ ಬೆಳೆಯಿತು. ಒಂದು ಸಿದ್ಧಾಂತ ಒಂದು ಶಾಸ್ತ್ರವಾಗಿ ಸ್ಥಿರವಾಗಿ ರೂಪುಗೊಳ್ಳಲು ಸಾವಿರಾರು ವರ್ಷಗಳೇಬೇಕಾದವು. ಆಯುರ್ವೇದ, ನಾಟಿವೈದ್ಯ ಪದ್ಧತಿ, ಪ್ರಕೃತಿ ಚಿಕಿತ್ಸೆ ಮುಂತಾದವು ಒಂದೇ ಸರಳರೇಖೆಯಲ್ಲಿ ಬರುವಂತಹುಗಳು. ಇವುಗಳನ್ನು ಆಯಾ ಸಂದರ್ಭದಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗಿದೆ. ಆದರೆ ಇವುಗಳೆಲ್ಲವೂ ಒಂದೇ ಎಂದು ಹೇಳಲಾಗುತ್ತಿದೆ. ವಾಸ್ತವದಲ್ಲಿ ಇವುಗಳು ಬೇರೆ ಬೇರೆ ಚಿಕಿತ್ಸಾ ವಿಧಾನಗಳಿಂದ ಜನಬಳಕೆಯಲ್ಲಿರುವುದು ಕಂಡುಬರುತ್ತದೆ. "ಭಾರತದಲ್ಲೆಡೆ ಬ್ರಿಟಿಶ್ ಸಾಮ್ರಾಜ್ಯಶಾಹಿ ಧೋರಣೆಯ ಕಪಿಮುಷ್ಟಿಯ ಕರಾಳ ದಿನಗಳು ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಎಲ್ಲೆಲ್ಲೂ ಅರಾಜಕತೆ ಶೋಷಣೆ, ದಾರಿದ್ರ್ಯ, ಬಡತನ, ಅನಾರೋಗ್ಯದಿಂದ ಬಳಲುತ್ತಿದ್ದಂತಹ ಕಾಲದಲ್ಲಿ ಆ ಹಿಂದೆ ಇತಿಹಾಸಪೂರ್ವದಿಂದ ಈವರೆಗೆ ಮಹತ್ತರವಾದ ಬದಲಾವಣೆಯಾಗಿವೆ. ಅಮೇರಿಕನ್ನರ ನಾಗರಿಕತೆಯಲ್ಲಿ ಅಜೆಕ್ಟ್ ವೈದ್ಯಶಾಸ್ತ್ರ, ಮೆಸಪೆಟೋಮಿಯ ಹಮ್ಮುರವಿ ವೈದ್ಯನೀತಿ, ಅಸಿರಿಯನ್ನರ ಔಷಧ ಗ್ರಂಥ, ಈಜಿಪ್ಟ್ ವೈದ್ಯಶಾಸ್ತ್ರ, ಯಹೂದಿಯರ ವೈದ್ಯಶಾಸ್ತ್ರ, ಹಿಂದೂ ದೇಶದ ವೈದ್ಯಶಾಸ್ತ್ರಗಳು ಬಂದಿದ್ದು ೪-೩ನೇ ಶತಮಾನದಲ್ಲಿ ವೈಜ್ಞಾನಿಕ ರೀತಿಯಲ್ಲಿ ಈಗ ಆಯುರ್ವೇದದ ಬಳಕೆ ೩೦೦೦ವರ್ಷಗಳಿಂದ ಕ್ರಿ.ಪೂ.೧೬೦೦ವರೆಗೆ ಇದ್ದು ನಂತರ ಆರ್ಯರ ಶಿಲಾಯುಗ, ಸಿಂದೂ ನದಿನಾಗರಿಕತೆ, ವೇದಕಾಲ, ಉಪನಿಷತ್‌ಕಾಲ, ಬುದ್ಧಕಾಲ, ಹೀಗೆ ಹತ್ತು ಹಲವು ಕಾಲಗಳು ಗತಿಸಿ ಕ್ರಿ.ಪೂ.೨೦೦ರ ನಂತರ ವೈದ್ಯಕೀಯದಲ್ಲಿ ಮಹತ್ತರ ಬೆಳವಣಿಗೆ ವೈಜ್ಞಾನಿಕ ಆವಿಷ್ಕಾರವನ್ನು ನೋಡುತ್ತೇವೆ. ಅತ್ರೇಯನ ಶಿಷ್ಯ ಅಗ್ನಿವೇಶ ಬರೆದ ವೈದ್ಯ ಗ್ರಂಥವನ್ನು ಚರಕ ತಿದ್ದಿ ಹೊಸರೂಪಕೊಟ್ಟು ಸಂಹಿತೆಗಳನ್ನಾಗಿಸಿದ ನಂತರ ಸುಶ್ರುತ ವಾಗ್ಭಟ ಧನ್ವಂತರಿ ನಾಗಾರ್ಜುನ ಹೀಗೆ ಹಲವಾರು ವೈದ್ಯ ಗ್ರಂಥಗಳನ್ನು ಪರಾಮರ್ಶಿಸಿದರು. ವೈದ್ಯ ಶಿಕ್ಷಣಕ್ಕೆ ಬುದ್ಧನ ಕಾಲದ ನಳಂದ ಮತ್ತು ತಕ್ಷಶಿಲಾ ವಿಶ್ವವಿದ್ಯಾಲಯಗಳು ಪ್ರಾರಂಭವಾದವು. ಅದೇ ರೀತಿಯಲ್ಲಿ ಪ್ರಾಚೀನ ಚೀನಿ ವೈದ್ಯಶಾಸ್ತ್ರದಲ್ಲಿನ ಮತ್ತುಯಾಂಗ್ ಶಕ್ತಿ ಪೆನ್‌ನೂನ್ ತತ್ವ ನಂತರದಲ್ಲಿ ಗ್ರೀಸ್ ದೇಶದಲ್ಲಿ ಗ್ರೀಸ್ ವೈದ್ಯಶಾಸ್ತ್ರ, ವಿಸ್ಕುಲೇಪಿಯನ್, ತತ್ವಜ್ಞಾನ ವೈದ್ಯರುಗಳಾದ ತೇಲೀಸ್, ಅನಾಕ್ಸಿಮಾಂಡರ್, ಪೈಥಾಗೊರಸ್, ಅನಾಕ್ಸಿಗೊರಾಸ್, ಅಲೆಗ್ಝಾಂಡ್ರಿ ಮುಂತಾದವರ ಪೂರ್ವಿಕ ಚಿಂತನಕಾರರ ಹೆಸರು ಅಚ್ಚ ಹಸಿರಾಗಿವೆ.  ಇತಿಹಾಸದಲ್ಲಿ ಉಳಿದ ವೈದ್ಯರುಗಳಲ್ಲದೇ ಇತರರೂ ಕೂಡ ಇಂದಿನ ಹೊಸ ಆವಿಷ್ಕಾರಗಳಲ್ಲಿ ಅಂದಿನ ವೈದ್ಯರುಗಳಂತೆ ಈ ಶತಮಾನದಲ್ಲೂ ಬಂದು ಹೋಗಿದ್ದಾರೆ. ಅದರಂತೆ ಮುಖ್ಯವಾಗಿ ಚರಕ ಮತ್ತು ಶುಶ್ರುತರ ಗ್ರಂಥಗಳ ಸಾರಾಂಶವನ್ನು ನೋಡಬಹುದಾಗಿದೆ".[೭] ಇದು ಮುಖ್ಯ ಕೂಡ. ಏಕೆಂದರೆ ವೈದ್ಯಶಾಸ್ತ್ರಕ್ಕೆ ತಳಪಾಯವನ್ನು ಹಾಕಿದವರು ಇವರೇ ಎಂದರೆ ಅತಿಶಯೋಕ್ತಿ ಎನಿಸಲಾರದು. ಹಾಗಾಗಿ ಇವುಗಳ ಬಗ್ಗೆ ತಿಳಿದಕೊಳ್ಳುವುದು ಅವಶ್ಯಕವಾಗಿದೆ.

“ಚರಕ ಸಂಹಿತೆಯ ಕಾಲದಲ್ಲಿ ವೈದ್ಯಕೀಯ ವಿಜ್ಞಾನವು ಅನೇಕ ಮಹತ್ತರ ತತ್ವಗಳನ್ನು ಪ್ರತಿತಂತ್ರ ಸಿದ್ಧಾಂತಗಳನ್ನು ಪದ್ಧತಿಯ ಮೂಲಕ ಅನ್ವಯ ಮಾಡುತ್ತಾ ಬಂದಿತು. ಇದನ್ನು ಪ್ರತಿತಂತ್ರ ಸಿದ್ಧಾಂತ ಎನ್ನುವರು. ಆಯುರ್ವೇದದ ಪ್ರಾಚೀನ ವೈದ್ಯ ಪದ್ಧತಿಯು “ಬೃಹತ್‌ತ್ರಾಯೀ” ಎನ್ನಲಾದ ಚರಕ ಸಂಹಿತೆ, ಸುಶ್ರುತ ಸಂಹಿತೆ ಮತ್ತು ವಾಗ್ಭಟನ ಅಷ್ಟಾಂಗ ಸಂಗ್ರಹಗಳು ಮೂಲ ಆಕರ ಗ್ರಂಥಗಳು. ನಂತರ ಬಂದ ಕಾಶ್ಯಪ ಮತ್ತು ಹಾರೀತರ ಸಂಹಿತೆಗಳು ಮೂಲಗ್ರಂಥಗಳನ್ನಾಧರಿಸಿವೆ. ಚರಕ ಸಂಹಿತೆಯ ೮ ಕಾಂಡಗಳಲ್ಲಿ ೧೨೬ ಅಧ್ಯಾಯ ಹೊಂದಿದ್ದು, ಗದ್ಯಪದ್ಯ ಶೈಲಿಯಲ್ಲಿದೆ. ಸುಶ್ರುತ ಸಂಹಿತೆಯಲ್ಲಿ ೫ ಕಾಂಡಗಳಲ್ಲಿ ೧೨೦ ಅಧ್ಯಾಯಗಳನ್ನು ಹೊಂದಿದೆ. ಈ ಕಾಂಡಗಳಿಗೆ “ಸ್ಥಾನಗಳು” ಎನ್ನಲಾಗಿದೆ. ಚರಕ ಸಂಹಿತೆಯಲ್ಲಿನ ಮುಖ್ಯ ಅಂಶಗಳು ಯಾವುವು ಎಂಬುದನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

೧. ವೈದ್ಯಕೀಯ ಇತಿಹಾಸ, ಮೂಲತತ್ವ ಸೈದ್ಧಾಂತಿಕ ಆದಾರದ “ಮುಖ್ಯಸ್ಥಾನ”

೨. ರೋಗಗಳಿಗೆ ಕಾರಣ ಮತ್ತು ಲಕ್ಷಣ ನಿರೂಪಿಸುವ “ನಿಧಾನ ಸ್ಥಾನ”

೩. ಬೌತದ್ರವ್ಯಗುಣವು ಶರೀರದಲ್ಲಾಗುವ ಪರಿಣಾಮ ತಿಳಿಸುವ ವೈದ್ಯಕೀಯ ಪದ್ಧತಿಯ ಲಕ್ಷಣಗಳು ಮತ್ತು ವೈದ್ಯ “ನೀತಿ ಸಂಹಿತೆ” ನಿರೂಪಿಸುತ್ತಿದೆ.

೪. ಶರೀರ ರಚನೆ ಭ್ರೂಣಶಾಸ್ತ್ರ, ತತ್ವಾಸ್ತ್ರವನ್ನೊಳಗೊಂಡ “ಶರೀರ ಸ್ಥಾನ”

೫. ರೋಗ ಕ್ರಮದ ಬಗ್ಗೆ “ಇಂದ್ರಿಯ ಸ್ಥಾನ”ದಲ್ಲಿದೆ.

೬. ಔಷಧ ಶಾಸ್ತ್ರ, ಪಥ್ಯಕ್ರಮ, ಔಷಧ ತಯಾರಿಕಾ ವಿಧಾನ ತಿಳಿಸುವ ಚಿಕಿತ್ಸಾ ಸ್ಥಾನ.

೭. ಔಷಧ ಶಾಸ್ತ್ರವನ್ನು ಸಂಕ್ಷಿಪ್ತವಾಗಿ ತಿಳಿಸುವ ಕಲ್ಪಸ್ಥಾನ.

೮. ಶೋಧನ ಕ್ರಮಗಳನ್ನು ತಿಳಿಸಿ ಮೂತ್ರರೋಗಗಳತ್ತ ಗಮನ ಹರಿಸಿರುವ ಸಿದ್ಧಿ ಸ್ಥಾನ.”[೨]

ಮುಖ್ಯವಾಗಿ ಈ ಗ್ರಂಥಗಳಲ್ಲಿ ತಿಳಿದು ಬರುವುದೇನೆಂದರೆ “ರೋಗವೆಂಬುದು ರೋಗವೇ ಹೊರತು ಅತೀಮಾನವ ಲಕ್ಷಣವೇನೂ ಅಲ್ಲ”. ಎಂಬ ಖಚಿತ ಧೋರಣೆಯನ್ನು ಅನೇಕ ಶಾಸ್ತ್ರಜ್ಞರು ಒಂದೆಡೆ ಕುಳಿತು ಚರ್ಚಿಸಿ, ತಾರ್ಕಿಕವಾಗಿ ಅಭಿಪ್ರಾಯ ಮಂಡನೆಯಿಂದ ಪ್ರಾಯೋಗಿಕವಾಗಿ ಕಂಡುಕೊಂಡ ದೃಢ ಹೇಳಿಕೆಗಳ ನಿಲುವೂ ಸಹ ಚರಕ ಸಂಹಿತೆಯಲ್ಲಿ ಪ್ರಸ್ತುತವಿದೆ. ಇದರಿಂದ ನಾವು “ಅನಾದಿಕಾಲದಿಂದಲೂ ಮೌಢ್ಯಗಳ ನಂಟನ್ನು ನೆಂಟನನ್ನಾಗಿ ಬರಮಾಡುತ್ತಿರುವುದು ನಿಜಕ್ಕೂ ಶೈಲಿಯ ಮೂರ್ಖತನವೇ ಸರಿ ಎಂದು ಈ ಕಾಲದ ಮನುಕುಲಕ್ಕೆ ಸಾರಸಗಟಾಗಿ ಉತ್ತರಿಸಬಹುದು.

ಸುಶ್ರುತ ಸಂಹಿತೆಯು ಚರಕ ಸಂಹಿತೆಗಿಂತ ಚಿಕ್ಕದಾದುದು. ಶಲ್ಯ ಚಿಕಿತ್ಸೆಗೆ ವಿಶಿಷ್ಟ ಸ್ಥಾನ ಬಿಟ್ಟರೆ ಹೆಚ್ಚಾಗಿ ಸಾಂಪ್ರದಾಯಿಕವೇ ಅಡಕವಾಗಿದೆ. ಇವನು ತ್ರಿಮಲ್ಲಭಟ್ಟನ ಗ್ರಂಥವನ್ನು ಪರಿಚಯಿಸಿದ್ದಾನೆ. ಇದು ಪ್ರಾಚೀನ ವೈದ್ಯ ಮೊದಲಿಗೆ ಒಪ್ಪುತ್ತದೆಯಾದರೂ ಚರಕ ಸಂಹಿತೆಯಂತೆ ವೈದ್ಯ ಪದ್ಧತಿ ಮತ್ತು ಸಿದ್ದಾಂತಗಳ ವಿರಳತೆ ಇದೆ ಎಂಬುದಾಗಿ ಡಾ.ರಾಮಕೃಷ್ಣರವರ “ಭಾರತೀಯ ವಿಜ್ಞಾನ ಬೆಳೆದುಬಂದ ದಾರಿ”ಯಲ್ಲಿ ತಿಳಿಸಿದ್ದಾರೆ.

ಈ ಚರಕ ಮತ್ತು ಸುಶ್ರುತ ಸಂಹಿತೆಗಳನ್ನು ಪರಿಚಯಿಸಲು ಕಾರಣವೇನೆಂದರೆ ಭಾರತೀಯ ವೈದ್ಯ ಶಾಸ್ತ್ರಕ್ಕೆ ತಳಪಾಯವನ್ನು ಹಾಕಿದವರು ಇವರದಾಗಿದ್ದು, ಮುಖ್ಯವಾಗಿ ಲಿಖಿತ ರೂಪದಲ್ಲಿ ವೈದ್ಯಕೀಯ ಪದ್ಧತಿಗಳನ್ನು ಬರೆದಿಟ್ಟಿರುವುದರಿಂದ ಮತ್ತು ಈ ಲಿಖಿತ ರೂಪದಲ್ಲಿರುವುದು ಮುಂದಿನ ಪೀಳಿಗೆಯವರಿಗೆ ವರದಾನವಾಗಿ ಪರಿಣಮಿಸಿ ಇದರಿಂದ ಹಲವಾರು ವೈದ್ಯ ಪದ್ಧತಿಗಳನ್ನು ಸಮಾಜಕ್ಕೆ ಪರಿಚಯಿಸಲಾಯಿತು. ಈ ನಿಟ್ಟಿನಲ್ಲಿ ಅಲೋಪತಿ, ಆಯುರ್ವೇದ, ನಾಟಿವೈದ್ಯ ಪದ್ಧತಿ, ಹೋಮಿಯೋಪತಿ, ಯುನಾನಿ, ಸಿದ್ಧ, ಪ್ರಕೃತಿ ಚಿಕಿತ್ಸೆ, ಆಯಸ್ಕಾಂತ ಚಿಕಿತ್ಸೆ, ಜ್ಯೂಸ್ ಥೆರಪಿ, ವರ್ಣ ಚಿಕಿತ್ಸೆ, ತೈಲಚಿಕಿತ್ಸೆ, ಪಿರಾಮಿಡ್ ಥೆರಪಿ ಈ ರೀತಿಯಲ್ಲಿ ಹಲವಾರು ಬಗೆಬಗೆಯ ವೈದ್ಯಪದ್ಧತಿಯ ಕ್ರಮಗಳು ಹುಟ್ಟಿಕೊಂಡವು. ಈ ಎಲ್ಲಾ ಪದ್ಧತಿಗೆ ಮುಖ್ಯವಾಗಿ ಚರಕ ಮತ್ತು ಸುಶ್ರುತ ಸಂಹಿತೆಗಳು ಆಧಾರ ಇರುವುದು ಕಂಡುಬರುತ್ತಿದೆ. ಇವುಗಳಲ್ಲಿ ಕೆಲವು ಚಿಕಿತ್ಸಾ ಪದ್ಧತಿಗಳು ಲಿಖಿತ ರೂಪದಲ್ಲಿ ಬರೆಯಲ್ಪಟ್ಟಿದ್ದರೆ, ಕೆಲವುಗಳಿಗೆ ಲಿಖಿತ ರೂಪ ಎಂಬುದೇ ಇಲ್ಲವಾಗಿದೆ. ಬದಲಾಗಿ ಮೌಖಿಕವಾಗಿ ಬಾಯಿಂದ ಬಾಯಿಗೆ ವಂಶ ಪಾರಂಪರ್ಯವಾಗಿ ವೈದ್ಯಕೀಯ ಚಿಕಿತ್ಸೆಯನ್ನು ನೀಡುವುದನ್ನು ಬಳಸಿಕೊಂಡು ಬರಲಾಗಿದೆ. ಈ ಸಾಲಿನಲ್ಲಿ ಈ ನಾಟಿ ವೈದ್ಯ ಪದ್ಧತಿಯು ಸೇರುತ್ತದೆ.

ನಾಟಿ ವೈದ್ಯಪದ್ಧತಿಯು ಆದಿಮಾನವನ ಕಾಲದಿಂದ ಹಿಡಿದು ಇಂದಿನವರೆಗೂ ಯಾವುದೇ ಲಿಪಿಯನ್ನು ಅಥವಾ ಬರವಣಿಗೆ ರೂಪದಲ್ಲಿ ಹಿಡಿದಿಡಲ್ಪಟ್ಟಿಲ್ಲ. ಇದು ಮೌಖಿಕವಾಗಿ ಬಹಳಷ್ಟು ಕಡೆ ಚಾಲ್ತಿಯಲ್ಲಿದೆ. ಚರಕ ಮತ್ತು ಶುಶ್ರುತ ಸಂಹಿತೆಗಳು ಈ ನಾಟಿ ವೈದ್ಯಪದ್ಧತಿಗೆ ಒಂದು ಲಿಪಿಯನ್ನು ಕೊಡುವುದರ ಮೂಲಕ ನಾಟಿವೈದ್ಯಪದ್ಧತಿಗೆ ಗಟ್ಟಿತನವನ್ನು ತಂದುಕೊಟ್ಟರು. ಮುಖ್ಯವಾಗಿ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಜನರಲ್ಲಿ ಹೆಚ್ಚು ಪ್ರಚಲಿತದಲ್ಲಿರುತ್ತದೆ. ಏಕೆಂದರೆ ಇವರು ದಿನಿತ್ಯವೂ ಪ್ರಕೃತಿಯಿಂದ ಒಡನಾಟ ನಡೆಸಿರುತ್ತಾರೆ. ಮತ್ತು ಯಾವುದೇ ರೋಗರುಜಿನಿಗಳು ಬಂದರೂ ಅವುಗಳಿಗೆ ಚಿಕಿತ್ಸೆಯನ್ನು ಪ್ರಕೃತಿಯಿಂದಲೇ ಪಡೆಯುತ್ತಾರೆ. ಇತ್ತೀಚೆಗೆ ನಗರಗಳು ಬೆಳೆದಂತೆ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಜನರು ನಗರಗಳಿಗೆ ಬಂದು ವಾಸಿಸಲು ಆರಂಭಿಸಿದರು. ಇದರಿಂದಾಗಿ ಹಳ್ಳಿಹಳ್ಳಿಗೆ ಚದುರಿಹೋದರು. ಹಾಗಾಗಿ ಇಂದು ಗ್ರಾಮಗಳಲ್ಲಿ ಈ ನಾಟಿವೈದ್ಯವನ್ನು ನೀಡುವವರು ಕಂಡುಬರುತ್ತಾರೆ. ಇದು ವಂಶಪಾರಂಪರ್ಯವಾಗಿ ಒಂದು ಪದ್ಧತಿಯಾಗಿ ರೂಢಿಸಿಕೊಂಡಿರುವುದರಿಂದ ಬಹಳಷ್ಟು ಪ್ರಭಾಯುತವಾಗಿ ಪರಿಣಾಮವನ್ನು ಬೀರುತ್ತದೆ. ಆದರೆ ಈ ನಾಟಿ ಔಷಧವನ್ನು ಕೊಡುವವರು ಯಾವ ಯಾವ ಕ್ರಮಗಳನ್ನು ಅನುಸರಿಸುತ್ತಾರೆ ಎಂಬುದನ್ನು ಮಾತ್ರ ತಿಳಿಸುವುದಿಲ್ಲ. ಏಕೆಂದರೆ ಇದಕ್ಕೆ ಒಂದು ಬಲವಾದ ನಂಬಿಕೆ ಇದೆ. ಹಾಗೂ ಚಿಕಿತ್ಸೆ ಫಲಕಾರಿಯಾಗುವುದಿಲ್ಲ ಎಂಬಂತಹದ್ದೂ ಕೂಡ ಇದರ ಗುಟ್ಟನ್ನು ರಟ್ಟಾಗಿಸಲು ಬಿಡುವುದಿಲ್ಲ. ಬುಡಕಟ್ಟು ಜನಾಂಗಗಳಲ್ಲಿ ಅತೀ ಹೆಚ್ಚು ಪ್ರಚಲಿತದಲ್ಲಿ ಇರುವುದನ್ನು ನಾವು ಇಂದಿಗೂ ಕಾಣಲಾಗುತ್ತದೆ. ದೇಹಕ್ಕೆ ಯಾವುದೇ ಚಿಕ್ಕ ತೊಂದರೆಯಾದರೂ ಸಹ ಅದಕ್ಕೆ ಅವರು ಆಧುನಿಕ ವೈದ್ಯಪದ್ಧತಿಗೆ ಮೊರೆಹೋಗುವುದಿಲ್ಲ. ಬದಲಾಗಿ ಅವರಲ್ಲಿಯೇ ಅವರ ಸುತ್ತಮುತ್ತಲಿನ ಪರಿಸರದಲ್ಲಿ ಸಿಗುವಂತಹ ಔಷಧೀಯ ಸಸ್ಯಗಳಿಂದ ಪರಿಹಾರವನ್ನು ಕಂಡುಕೊಳ್ಳುತ್ತಾರೆ.

"ಮನುಷ್ಯನನ್ನು ಆಗಾಗ ಬೇನೆ ಬೇಸರಿಕೆಗಳು ರೋಗ ರುಜಿನಗಳು ಆವರಿಸಿ ಅಲುಗಾಡಿಸಿರುವುದುಂಟು. ಅವುಗಳಿಂದ ಪಾರಾಗಲು ಅವನು ತನ್ನ ಸುತ್ತಲಿನ ಪ್ರಕೃತಿಯನ್ನೇ ದೇಶಿಯ ವೈದ್ಯ ಪದ್ಧತಿಯ ಮೂಲಕ ಬಳಸಿಕೊಂಡು ಆಯಾ ರೋಗಗಳಿಗೆ ಬೇಕಾದ ಮದ್ದನ್ನು ಸಿದ್ಧಪಡಿಸಿಕೊಳ್ಳುತ್ತಿದ್ದಾನೆ. ಹಾಗೆ ಹಲವು ಪ್ರಯತ್ನ ಪ್ರಯೋಗ ಅನುಭವಗಳಿಂದ ರೂಢಿಸಿಕೊಂಡ ಈ ದೇಶಿಯ ವೈದ್ಯಪದ್ಧತಿಯನ್ನು ನಾಟಿ ಅಥವಾ ಗೌಂಟಿ ಎಂತಲೂ ಕರೆಯುವುದುಂಟು. ನಾಗರಿಕತೆಯ ಸೋಂಕಿಲ್ಲದೆ ಅಲೆಮಾರಿ ಸ್ಥಿತಿಯಲ್ಲಿ ಬದುಕುವ ಶಿಳ್ಳೇಕ್ಯಾತರಲ್ಲಿ ಇಂದಿಗೂ ಈ ನಾಟಿ ವೈದ್ಯಪದ್ಧತಿ ಬಳಕೆಯಲ್ಲಿದೆ. ಇವರು ವಿಲಾಯತಿ ಔಷಧಿಗಳಿಗಿಂತ ನಾಟಿ ಔಷಧಿಗಳೇ ಹೆಚ್ಚು ಪರಿಣಾಮಕಾರಿಯೆಂದು ತಿಳಿದಿದ್ದಾರೆ. ಇವರಲ್ಲಿ ಅನುಭವಿಕ ಹಿರಿಯರು, ವಯಸ್ಸಾದವರು ತೊಡಗಿರುತ್ತಾರೆ. ಹಾಗೆಯೇ ಇದೊಂದು ಅವರಿಗೆ ಉಪಕಸುಬಾಗಿ ಪರಿವರ್ತಿತಗೊಂಡಿದೆ. ಇವರ ಔಷಧಗಳೆಲ್ಲ ಸ್ವಾನುಭವ ಮತ್ತು ಇನ್ನೊಬ್ಬರಿಂದ ಕೇಳಿ ಕೇಳಿ ತಿಳಿದುಕೊಂಡಿರುವವುಗಳಾಗಿರುತ್ತವೆ."[2]

ಈ ನಾಟಿ ಔಷಧಿ ಪದ್ಧತಿಯಲ್ಲಿ ರೋಗ ನಿವಾರಣೆಗೆ ಎಲೆ, ಬಳ್ಳಿ, ಹೂಗಳು, ನಾರು, ಬೇರು, ಗೆಡ್ಡೆ, ಗೆಣಸು, ಗಿಡ ಮೂಲಿಕೆಗಳನ್ನು ತಮ್ಮ ಸುತ್ತಲಿನ ಬೇಲಿಬಳ್ಳಿ, ಅಡವಿ ಅರಣ್ಯಗಳಲ್ಲಿ ಅಲೆದಾಡಿ ಸಂಗ್ರಹಿಸುವರು. ಕೆಲವರು ವಾರ, ತಿಥಿಗಳನ್ನು ಗಮನಿಸಿ, ಗಿಡ ಮೂಲಿಕೆ ಸಂಗ್ರಹಿಸಿದರೆ ಇನ್ನು ಕೆಲವರು ಅದಾವುದನ್ನು ಗಮನಿಸದೆ ಅವಶ್ಯಕತೆಗೆ ಅನುಗುಣವಾಗಿ ಇಲ್ಲವೆ ದೊರೆತಾಗ ಅವನ್ನು ಸಂಗ್ರಹಿಸುವ ಪದ್ಧತಿಯನ್ನು ಇಟ್ಟುಕೊಂಡಿರುತ್ತಾರೆ. ರೋಗಿಗಳಿಗೆ ಬೇಕಾದ ಗಿಡಮೂಲಿಕೆ ಹಲವು ಮಿಶ್ರಣಗಳಿಂದ ಕೂಡಿದ ಔಷಧ ಮತ್ತು ಅವುಗಳನ್ನು ತಯಾರಿಸುವ ವಿಧಾನವನ್ನು ಈ ಹಿಂದೆಯೇ ಹೇಳಿದಂತೆ ಗುಟ್ಟಾಗಿ ಇಡುವರು. ಇತರರಿಗೆ ಬಾಯಿ ಬಿಟ್ಟು ಅವುಗಳ ಹೆಸರು ಹೇಳುವುದರಿಂದ ಅವುಗಳ ಶಕ್ತಿ ಹಾಳಾಗಿ ಮಹತ್ವ ಕಡಿಮೆಯಾಗಿ, ರೋಗಿಗಳಿಗೆ ಮದ್ದು ನಾಟುವುದಿಲ್ಲವೆಂದು ತಿಳಿದಿದ್ದಾರೆ. ತಾವು ತಿರುಗಾಡುವ ಊರುಗಳಲ್ಲಿ ನಾಟಿ ಔಷಧಿಗಳನ್ನು ತಿಳಿದು ಪರಿಣಿತರೆಂದು ಪರಿಚಿತರಾಗುತ್ತಾರೆ. ಕೆಲವು ಸಲ ರೋಗಗಳಿಂದ ಬಳಲುವವರನ್ನು ನೋಡಿ ಈ ವ್ಯಕ್ತಿಗೆ ಇಲ್ಲವೆ ಈ ಮಗುವಿಗೆ ಇಂಥ ರೋಗವಿದೆ ಎಂದು ಅದಕ್ಕೆ ತಮ್ಮಲ್ಲಿ ಔಷಧಿ ಇದೆ ಎಂದು ಹೇಳಿ ತಾವು ಅದರಲ್ಲಿ ತಿಳುವಳಿಕೆಯುಳ್ಳವರೆಂದು ಪರಿಚಯಿಸಿಕೊಳ್ಳುತ್ತಾರೆ. ತಮ್ಮ ನಾಟಿವೈದ್ಯದ ತಿಳುವಳಿಕೆಯನ್ನು ಬೇರೆಯವರಿಗೂ ಹೇಳದೆ ತಮ್ಮ ಮಕ್ಕಳಿಗೆ, ಮೊಮ್ಮಕ್ಕಳಿಗೆ ಹೇಳಿಕೊಡುತ್ತಾರೆ. ಹಿರಿಯರಿಂದ ಕಲಿತುಕೊಂಡು ಕಿರಿಯರು ಮೊದಲಿನವರ ಪದ್ಧತಿಯನ್ನು ಮುಂದುವರೆಸುವುದು ಕಂಡುಬರುತ್ತದೆ. ಅಲ್ಲಲ್ಲಿ ಕೆಲವರು ನೋಟುಪುಸ್ತಕಗಳಲ್ಲಿ ಬರೆದಿಟ್ಟುಕೊಂಡಿರುವುದು ಕಂಡುಬರುತ್ತದೆ. ತಾವು ಕೊಡುವ ಔಷಧಗಳಿಗೆ ಪ್ರತಿಫಲವಾಗಿ ಹಣ ಪಡೆದರೆ ತಮ್ಮ ಮದ್ದು ರೋಗಿಗಳಿಗೆ ನಾಟುವುದಿಲ್ಲ ಎನ್ನುವ ನಂಬಿಕೆ ಅವರಲ್ಲಿದೆ. ಆದರೂ ಕಾಲಮಾನ ಬದಲಾಗಿ ಔಷಧಿಗೆ ಪ್ರತಿಯಾಗಿ ಹಣ, ವಸ್ತು, ಒಡವೆ ಪಡೆಯುತ್ತಿದ್ದಾರೆ. ದೇಶೀಯ ವೈದ್ಯ ತಿಳಿದವರಿಗೆ ಅದೊಂದು ಉಪಜೀವನಕ್ಕೆ ಉಪವೃತ್ತಿಯಾಗಿಯೇ ಪರಿಣಮಿಸಿದೆ. ಇವರು ಮನುಷ್ಯರಿಗಲ್ಲದೆ ಪ್ರಾಣಿಗಳಿಗೂ ನಾಟಿ ಔಷಧಿಗಳನ್ನು ನೀಡುತ್ತಾರೆ. ರೋಗಿಯ ರೋಗದ ಕಲ್ಪನೆಯ ಹಿನ್ನೆಲೆಯಲ್ಲಿ ನಾಡಿನ ಮಿಡಿತವನ್ನು ಅನುಲಕ್ಷಿಸಿ ಔಷಧಿಕೊಡುತ್ತಾರೆ. ಅವರು

ಸಾಮಾನ್ಯವಾಗಿ ಕಟ್ಟು ಪಥ್ಯವನ್ನು ಕಾಯಲು ಹೇಳುತ್ತಾರೆ. ಔಷಧಗಳಲ್ಲಿ ನಂಬಿಕೆ ಇಟ್ಟು ಕ್ರಮಬದ್ಧವಾಗಿ ತೆಗೆದುಕೊಳ್ಳುತ್ತಾ ಹೋದರೆ, ಅದು ಪರಿಣಾಮ ಬೀರುವುದೆಂದು ಅದರಿಂದ ಬೇರೆ ಪ್ರತಿಕೂಲ ಪರಿಣಾಮಗಳಾಗಲಾರವೆಂದೂ ಹೇಳುತ್ತಾರೆ.

ಈ ನಾಟಿವೈದ್ಯಪದ್ಧತಿಯು ಹೀಗೆ ತನ್ನ ಇರುವುಕೆಯನ್ನು ಕಾಯ್ದುಕೊಂಡು ಬಂದಿರುವುದನ್ನು ಕಾಣುತ್ತೇವೆ. ಮುಖ್ಯವಾಗಿ ಈ ವೈದ್ಯ ಪದ್ಧತಿ ನಂಬಿಕೆಗಳಿಗೆ ಹೆಚ್ಚು ಮಹತ್ವವನ್ನು ಕೊಡುತ್ತದೆ. ಹಾಗೆಯೇ ಇಂದು ಈ ಪದ್ಧತಿ ಪ್ರತಿಯೊಂದು ಗ್ರಾಮಗಳಲ್ಲಿಯೂ ಕಂಡುಬರುವಂತಾಗಿದೆ. ಏಕೆಂದರೆ ಕೆಲವು ಅನಿವಾರ್ಯ ಕಾರಣಗಳಿಂದಾಗಿ ಈ ವೈದ್ಯಪದ್ಧತಿಯನ್ನು ಅನುಸರಿಸುವವರು ಹಲವಾರು ಗ್ರಾಮಗಳಿಗೆ ಚದುರಿಹೋದುದೇ ಕಾರಣವಾಗಿದೆ. ಇನ್ನು ಈ ವೈದ್ಯ ಪದ್ಧತಿಯಲ್ಲಿ ಮಹಿಳೆಯರು ಪ್ರಮುಖ ಪಾತ್ರವನ್ನು ವಹಿಸುತ್ತಾರೆ ನಿಜ. ಆದರೆ ಅವರ ಈ ಪಾತ್ರ ಮೇಲ್ನೋಟಕ್ಕೆ ಕಂಡುಬರುವುದಿಲ್ಲ. ಏಕೆಂದರೆ ಮಹಿಳೆ ಪುರುಷರಿಗೆ ಸಹಾಯಕಳಾಗಿ ಮಾತ್ರ ನಿಲ್ಲುತ್ತಾಳೆ. ಹಾಗಾಗಿ ಅವಳು ಸಹಾಯಕಳಂತೆಯೇ ಮುಂದುವರೆಯುವುದರಿಂದ ಅವಳ ಪರಿಶ್ರಮ ಕಂಡುಬರುವುದಿಲ್ಲ. ಆದರೂ ಸಹ ಅವಳು ಹಲವಾರು ವಿಧದಲ್ಲಿ ಈ ನಾಟಿ ವೈದ್ಯಪದ್ಧತಿಯಲ್ಲಿ ಕಂಡುಬರುತ್ತಿರುವುದನ್ನು ನಾವು ಕಾಣುತ್ತೇವೆ.

### ೬.೨. ನಾಟಿವೈದ್ಯ ಪದ್ಧತಿಯಲ್ಲಿ ಮಹಿಳೆಯರು

ಮಹಿಳೆ ತನ್ನ ಸ್ವಂತ ಆರೋಗ್ಯವನ್ನು ಕಾಪಾಡಿಕೊಳ್ಳಲು ಕೆಲವು ಮಾರ್ಗೋಪಾಯಗಳನ್ನು ಕಂಡುಕೊಂಡಿದ್ದಾಳೆ. ಅವುಗಳಲ್ಲಿ ಈ ನಾಟಿವೈದ್ಯ ಪದ್ಧತಿಯೂ ಒಂದಾಗಿದೆ. ಇಲ್ಲಿ ಮುಖ್ಯವಾಗಿ ಮಹಿಳೆ ಪುರುಷನಿಗೆ ತಿಳಿಯದಂತೆಯೇ ಕೆಲವು ವೈದ್ಯೋಪಚಾರಗಳನ್ನು ಪಡೆಯುತ್ತಿರುತ್ತಾಳೆ. ಮತ್ತು ಕುಟುಂಬದಲ್ಲಿಯ ಸದಸ್ಯರು ಏನಾದರೂ ಕಾಯಿಲೆಗಳಿಗೆ ತುತ್ತಾದರೆ ಅವರನ್ನು ಕಾಪಾಡುವುದು ಕಂಡುಬರುತ್ತದೆ. ಕೆಲವು ಸಾಮಾನ್ಯ ಕಾಯಿಲೆಗಳಿಗೆ ತನ್ನಲ್ಲಿಯೇ ಚಿಕಿತ್ಸೆಯನ್ನು ಹೊಂದಿರುತ್ತಾಳೆ. ಕುಟುಂಬದಲ್ಲಿ ಈ ತರಹದಲ್ಲಿ ಚಿಕಿತ್ಸೆಯನ್ನು ಪಡೆಯುವವರು ತೀರಾ ಕಡಿಮೆ. ಏಕೆಂದರೆ ಕುಟುಂಬದಲ್ಲಿ ಏನೇ ಸಂಭವಿಸಿದರೂ ಸಹ ಕುಟುಂಬದ ಯಜಮಾನನಿಗೆ ತಿಳಿಯಲೇ ಬೇಕು. ಹಾಗಾಗಿ ವೈಯಕ್ತಿಕವಾಗಿ ಮಹಿಳೆ ಏನನ್ನೂ ಕಲಿಯುವುದಿಲ್ಲ. ಹಾಗೂ ಕಲಿಯಲೂ ಸಹ ಪಿತೃಪ್ರಧಾನ ವ್ಯವಸ್ಥೆ ಬಿಡುವುದಿಲ್ಲ. ಶ್ರೇಣೀಕೃತವಾದ ನಮ್ಮ ಸಾಮಾಜಿಕ ಸಂರಚನೆಯಲ್ಲಿ ಜಾತಿ, ವರ್ಗ, ಮತಗಳ ಆಧಾರದ ಮೇಲೆ ಒಡಕು ಉಂಟಾಗಿರುವಂತೆ ಲಿಂಗಾಧಾರಿತವಾಗಿ ಇನ್ನೂ ಹೆಚ್ಚೆಚ್ಚು ತಾರತಮ್ಯ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಲಿಂಗವ್ಯವಸ್ಥೆಯ ನಿರ್ಮಾಪಕನೂ ಆಗಿರುವ ಪುರುಷವರ್ಗವು ತನ್ನ ಆಶಯಕ್ಕೆ ತಕ್ಕಂತೆ ಮಹಿಳಾ ವರ್ಗವನ್ನು ನಿರ್ಮಿಸಿಕೊಂಡಿದೆ. ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ನಿಯಂತ್ರಣ ಹೊಂದಿರುವ ಪುರುಷವರ್ಗ ತಾನುಸೂಚಿಸಿದ ಮೌಲ್ಯಗಳನ್ನೇ ಸಾಮಾಜಿಕ ಸಾಂಸ್ಕೃತಿಕ ಪರಮ ಮೌಲ್ಯಗಳೆಂದು ಅರ್ಥೈಸಿದೆ ಹಾಗೂ ಹೆಣ್ಣನ್ನು ಅದರಂತೆಯೇ ಒಪ್ಪಿಸಿಕೊಂಡಿದೆ. ಸ್ತ್ರೀಪುರುಷರು ಬದುಕಬೇಕಾದ ರೀತಿ ನೀತಿಗಳನ್ನು ತಿಳಿಯುವ ಹಾಗೂ ಮೂಲವಾಗಿದೆ. ಆದ್ದರಿಂದ ಹೆಣ್ಣು ಗಂಡಿನಿಂದ ನಿರ್ಮಿತಳಾದ ವ್ಯಕ್ತಿ ಎನಿಸಿಕೊಂಡಿದ್ದಾಳೆ. ಹಾಗಾಗಿ ಮಹಿಳೆ ಕುಟುಂಬದಲ್ಲಿಯಾಗಲೀ ಅಥವಾ

ಕುಟುಂಬದ ಹೊರಗೆ ಆಗಲೀ ಪುರುಷನಿಗೆ ಅಧೀನಳಾಗಿಯೆ ಇರಬೇಕಾಗಿದೆ. ಈ ನಿಟ್ಟಿನಲ್ಲಿ ತನ್ನ ವೈಯಕ್ತಿಕ ನೆಲೆಯಲ್ಲಿ ಏನನ್ನೂ ಮಾಡುವ ಹಾಗಿಲ್ಲ. ಪುರುಷ ಕುಟುಂಬ ಸಂಸ್ಥೆಯ ರಕ್ಷಣೆಗೆ ಮಹಿಳೆಯನ್ನು ಬಂದಿಸಿಟ್ಟ ಕಾರಣದಿಂದಾಗಿ ಆಕೆ ಗೃಹಿಣಿಯೆಂಬ ಶಾಶ್ವತ ಸ್ಥಾನದಲ್ಲಿ ಇರುವಂತಾಯಿತು. ಗೃಹಿಣಿಯ ಕಾರಣದಿಂದಲೇ ಅನೇಕ ಮಹಿಳೆಯರು ಕುಟುಂಬದ ಒಳಗಿನ ಕೆಲಸದಿಂದ ಮುಕ್ತರಾಗಿಲ್ಲ. ಈ ನಾಟಿವೈದ್ಯ ಪದ್ಧತಿಯನ್ನು ತನ್ನ ವೈಯಕ್ತಿಕ ನೆಲೆಯಲ್ಲಿ ಅಳವಡಿಸಿಕೊಂಡಿರುವ ಮಹಿಳೆಯರ ಪ್ರಮಾಣ ತೀರಾ ಕಡಿಮೆ ಇದೆ. ಏಕೆಂದರೆ ಕುಟುಂಬದಲ್ಲಿನ ಬಿಡುವಿಲ್ಲದ ಕೆಲಸಗಳಿಂದಾಗಿ ಮಹಿಳೆ ಅವುಗಳ ಮಧ್ಯೆಯೇ ಈ ವೈದ್ಯ ಪದ್ಧತಿಯನ್ನು ರೂಢಿಸಿಕೊಳ್ಳಬೇಕಾಗಿದೆ. ಇಲ್ಲಿ ಮುಖ್ಯವಾಗಿ ಇವಳ ಸೇವೆ ಏನಿದ್ದರೂ ಕುಟುಂಬಕ್ಕೆ ಮಾತ್ರ. ಆದರೆ ಪಿತೃಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯಿಂದ ಚಿಕಿತ್ಸೆಯನ್ನು ಪಡೆಯುವವರು ತೀರಾ ಕಡಿಮೆ ಹಾಗಾಗಿ ವೈಯಕ್ತಿಕ ನೆಲೆಯಲ್ಲಿ ಈ ನಾಟಿ ವೈದ್ಯ ಪದ್ಧತಿಯನ್ನು ಅನುಸರಿಸುವಂತಹ ಮಹಿಳೆಯರು ಹೆಚ್ಚಾಗಿ ಕಂಡುಬರುವುದಿಲ್ಲ.

ನಾಟಿ ವೈದ್ಯ ಪದ್ಧತಿಯನ್ನು ಒಂದು ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರು ನಮಗೆ ಕಂಡುಬರುವುದು ಸಹಜ. ಇವರು ಮುಖ್ಯವಾಗಿ ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ವೈದ್ಯ ಚಿಕಿತ್ಸೆಯನ್ನು ನೀಡುವವರಾಗಿದ್ದಾರೆ. ಇವರು ಒಂದು ಹಳ್ಳಿಗೆ ಮಾತ್ರ ಸೀಮಿತರಾಗಿರುತ್ತಾರೆ. ಮತ್ತು ಹಲವಾರು ಗ್ರಾಮಗಳಲ್ಲಿ ಪ್ರಚಾರವನ್ನು ಪಡೆದಿರುತ್ತಾರೆ. ಮತ್ತು ಯಾವುದೇ ವಾಣಿಜ್ಯ ಉದ್ದೇಶದಿಂದ ಕೂಡಿದ ಅಥವಾ ಲಾಭದ ಉದ್ದೇಶದಿಂದ ಇವರ ಚಿಕಿತ್ಸೆ ಕೂಡಿದವುಗಳಾಗಿರುವುದಿಲ್ಲ. ಕೇವಲ ಭಾವನಾತ್ಮಕ ಸಂದರ್ಭಗಳಿಗೆ ಅತೀ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿರುತ್ತಾರೆ. ಹಾಗಾಗಿ ಊರಿನಲ್ಲಿ ಮತ್ತು ತಮ್ಮ ಸಂಬಂಧಿಕರಲ್ಲಿ ಯಾರಿಗಾದರೂ ಏನಾದರೂ ತೊಂದರೆಗಳು ಆದಲ್ಲಿ ಅವರಿಗೆ ಚಿಕಿತ್ಸೆಯನ್ನು ನೀಡುವವರಾಗಿರುತ್ತಾರೆ. ಇವರು ಅತೀ ಹೆಚ್ಚಿನ ದುಡಿಮೆಯ ಕಾರ್ಯದಲ್ಲಿ ತೊಡಗಿಕೊಂಡಿರುತ್ತಾರೆ. ಮತ್ತು ಮನೆಯಲ್ಲಿ ಹಲವಾರು ನಿಂದನೆಗಳಿಗೆ ಒಳಗಾಗುತ್ತಾ ತಾವು ರೂಢಿಸಿಕೊಂಡಿರುವ ವೃತ್ತಿಯಲ್ಲಿ ತೊಡಗಿಕೊಂಡಿರುತ್ತಾರೆ. ಮುಖ್ಯವಾಗಿ "ಹಳ್ಳಿಗಳಲ್ಲಿ ಸೂಲಗಿತ್ತಿಯರು" ಎಂದು ಕರೆಯಲ್ಪಡುವ ಮಹಿಳೆಯರು ಗರ್ಭಿಣಿ ಮಹಿಳೆಯರ ಆರೈಕೆಯಲ್ಲಿ ತೊಡಗಿಕೊಂಡಿರುತ್ತಾರೆ. ಇವರು ಊರಿನಲ್ಲಿ ಯಾವೊಬ್ಬ ಮಹಿಳೆಯ ಹೆರಿಗೆ ಸಮಯದಲ್ಲಿ ಹಾಜರಾಗುವುದರೊಂದಿಗೆ ತಾವು ಕಲೆತಿರುವಂತಹ ಚಿಕಿತ್ಸಾ ವಿಧಾನಗಳನ್ನು ಅಲ್ಲಿ ಅಳವಡಿಸಿರುತ್ತಾರೆ. ಹಾಗಾಗಿ ಇಂದಿಗೂ ಸಹ ಹಳ್ಳಿಗಳಲ್ಲಿ ಈ ಸೂಲಗಿತ್ತಿಯರ ಪಾತ್ರ ಪ್ರಮುಖವಾಗಿರುವುದನ್ನು ನಾವು ಕಾಣುತ್ತೇವೆ. ಇವರು ಯಾವುದೇ ಹಣದ ಪ್ರತಿಫಲವನ್ನು ಅಪೇಕ್ಷಿಸುವುದಿಲ್ಲ. ಬದಲಾಗಿ ಚಿಕಿತ್ಸೆಯನ್ನು ಪಡೆದವರು ಏನು ಕೊಡುತ್ತಾರೋ ಅದರಿಂದಲೇ ತೃಪ್ತಿಯನ್ನು ಹೊಂದುತ್ತಾರೆ.

ಈ ನಾಟಿವೈದ್ಯ ಪದ್ಧತಿಯನ್ನು ಒಂದು ವೃತ್ತಿಯನ್ನಾಗಿ ತೆಗೆದುಕೊಂಡ ಮಹಿಳೆಯರು ಕಂಡುಬರುತ್ತಾರೆ ನಿಜ. ಆದರೆ ಇವರು ಸಂಪೂರ್ಣವಾಗಿ ವೃತ್ತಿಯನ್ನಾಗಿಸಿಕೊಂಡಿರುವುದಿಲ್ಲ. ಬದಲಾಗಿ ಒಂದು ಉಪಕಸುಬಿನಂತೆ ಈ ವೃತ್ತಿಯನ್ನು ಅನುಸರಿಸಿರುತ್ತಾರೆ. ಏಕೆಂದರೆ ಇದರ ಹಿಂದೆ ಪುರುಷನ ಕೈವಾಡವಿರುತ್ತದೆ. ಅಂದರೆ ಈ ವೃತ್ತಿ ಒಂದು ಉಪಕಸುಬಾಗಿದ್ದರೂ ಸಹ ಅದನ್ನೇ ಸಂಪೂರ್ಣವಾಗಿ

ಅವಲಂಬಿಸಿರುವುದಿಲ್ಲ. ಏಕೆಂದರೆ ಈ ವೃತ್ತಿಯನ್ನೇ ಸಂಪೂರ್ಣವಾಗಿ ಅವಲಂಬಿಸಿದರೆ ಅವನ ಜೀವನ ಸ್ಥಿತಗತಿಗಳು ಸುಧಾರಿಸುವುದು ಕಷ್ಟ. ಮುಖ್ಯವಾಗಿ ಈ ನಾಟಿವೈದ್ಯ ಪದ್ಧತಿಯನ್ನು ಅನುಸರಿಸುವವರು ನಿರ್ದಿಷ್ಟವಾಗಿ, ಖಚಿತವಾಗಿ ಹಣದ ಆಮಿಷವನ್ನು ಒಡ್ಡುವುದಿಲ್ಲ. ಬದಲಾಗಿ ರೋಗಿಯ ಕಡೆಯವರು ಏನು ಕೊಡುತ್ತಾರೋ ಅಥವಾ ಎಷ್ಟು ಕೊಡುತ್ತಾರೋ ಅದರಲ್ಲಿಯೇ ಸಂತೃಪ್ತಿಯನ್ನು ಪಡೆಯಬೇಕಾಗುತ್ತದೆ. ಇದು ಅವರು ಆರ್ಥಿಕವಾಗಿ ಬಲಿಷ್ಠರಾಗಲು ಸಹಕರಿಸುವುದಿಲ್ಲ. ಹಾಗಾಗಿ ಈ ನಾಟಿವೈದ್ಯ ವೃತ್ತಿಯನ್ನು ಒಂದು ಉಪಕಸುಬನ್ನಾಗಿ ಅಥವಾ ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರು ಹೆಚ್ಚಾಗಿ ಕಂಡುಬರುತ್ತಾರೆ. ಅದರಲ್ಲಿಯೂ ಮುಖ್ಯವಾಗಿ ಪುರುಷನ ಅಧೀನದಲ್ಲಿಯೇ ಮುಂದುವರೆಯುತ್ತಿರುವ ಮಹಿಳೆಯರು ಕಂಡುಬರುತ್ತಾರೆ. ಇವರಿಗೆ ಯಾವುದೇ ಸ್ವಾತಂತ್ರ್ಯ ಎಂಬುದು ಇರುವುದಿಲ್ಲ.

ಹೀಗೆ ನಾಟಿವೈದ್ಯ ಪದ್ಧತಿಯಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದರೂ ಸಹ ಅವರು ಪುರುಷನ ಹಿಡಿತದಲ್ಲಿಯೇ ಇರುವುದನ್ನು ನಾವು ಕಾಣುತ್ತೇವೆ. ಹೆಚ್ಚಾಗಿ ಈ ವೃತ್ತಿಯನ್ನು ಅನುಸರಿಸುವವರು ಕೆಳವರ್ಗ ಮತ್ತು ಮದ್ಯಮ ವರ್ಗದವರಾಗಿರುತ್ತಾರೆ. ಹಾಗಾಗಿ ಈ ವರ್ಗಗಳ ಕುಟುಂಬಗಳಲ್ಲಿನ ಮಹಿಳೆಯರ ಜೀವನ ಸ್ಥಿತಿಗತಿಗಳನ್ನು ತಿಳಿಯುವುದು ಮುಖ್ಯವಾಗುತ್ತದೆ.

### ೨.೩. ನಾಟಿವೈದ್ಯ ಪದ್ಧತಿಯಲ್ಲಿನ ಮಹಿಳೆಯರ ಜೀವನ ಸ್ಥಿತಿಗತಿಗಳು

ನಾಟಿವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವ ಮಹಿಳೆಯರ ಜೀವನ ಸ್ಥಿತಿಗತಿಗಳು ತುಂಬಾ ಚಿಂತಾಜನಕವಾಗಿರುತ್ತವೆ. ಈ ಹಿಂದೆಯೇ ಹೇಳಿದಂತೆ ಈ ವೈದ್ಯ ಪದ್ಧತಿಯನ್ನು ಮುಖ್ಯವಾಗಿ ಕೆಳ ಮತ್ತು ಮದ್ಯಮವರ್ಗದ ಕುಟುಂಬದವರು ಅನುಸರಿಸುತ್ತಾರೆ. ಈ ವರ್ಗದ ಕುಟುಂಬಗಳಲ್ಲಿಯ ಮಹಿಳೆಯರು ಹೆಚ್ಚಿನ ಹಿಂಸೆಯನ್ನು ಅನುಭವಿಸುತ್ತಾರೆ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲವು ಪ್ರಕಾರಗಳ ಅಧ್ಯಯನದಲ್ಲಿ ಕಂಡುಕೊಳ್ಳಲಾಯಿತು. ಮುಖ್ಯವಾಗಿ ಈ ನಾಟಿವೈದ್ಯಪದ್ಧತಿಯನ್ನು ಅನುಸರಿಸುತ್ತಿರುವ ಮಹಿಳೆಯರ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸ್ಥಿತಿಗತಿಗಳ ಬಗ್ಗೆ ತಿಳಿದುಕೊಳ್ಳುವುದು ಮುಖ್ಯವಾಗಿದೆ.

#### ೨.೩.೧. ಸಾಮಾಜಿಕ ಸ್ಥಿತಿಗತಿಗಳು

ಮಹಿಳೆಯರ ಇಂದಿನ ಸಾಮಾಜಿಕ ಸ್ಥಾನಮಾನಗಳನ್ನು ಗಮನಿಸುವುದಾದರೆ ಸ್ತ್ರೀಯು ಪುರುಷರಿಗಿಂತ ಯಾವುದರಲ್ಲಿಯೂ ಕನಿಷ್ಠಳಲ್ಲ ಎಂಬ ವಿಷಯವನ್ನು ತಳ್ಳಿಹಾಕುವಂತಿಲ್ಲ. ನಗರ ಪ್ರದೇಶಗಳಲ್ಲಿ ಇಂದು ಸ್ತ್ರೀಯರು ಪ್ರವೇಶವನ್ನು ಪಡೆಯದೇ ಇರುವ ವಲಯಗಳು ಇಲ್ಲವೇ ಇಲ್ಲ. ಆದರೆ ಸ್ತ್ರೀಯು ಎಷ್ಟೇ ಬಲಿಷ್ಠಳಾಗಿದ್ದರೂ, ಎಲ್ಲಾ ವಲಯಗಳಲ್ಲಿಯೂ ತನ್ನ ಛಾಪನ್ನು ಮೂಡಿಸುವವಳಾಗಿದ್ದರೂ ಸಹ ಪುರುಷಶಾಹಿ ವ್ಯವಸ್ಥೆಯ ಮೌಲ್ಯಗಳಡಿಯಲ್ಲಿಯೇ ತನ್ನ ಚಲನೆಯನ್ನು ಕಾಯ್ದುಕೊಂಡಿರುತ್ತಾಳೆ. ಇಲ್ಲಿ ಮುಖ್ಯವಾಗಿ ಪುರುಷನು ಸ್ತ್ರೀಗಿಂತ ಶಾರೀರಿಕ ದೃಷ್ಟಿಯಲ್ಲಿ ಬಲಿಷ್ಠನಾಗಿರಬಹುದು. ಆದರೆ "ಸ್ತ್ರೀ ಪುರುಷರ ನಡುವಣ ಲಿಂಗಬೇಧವು ನಿಸರ್ಗ ನಿರ್ಮಿತವಾದುದು. ಅಂದರೆ ಸ್ತ್ರೀಯು ಮೊದಲು

ಮಾನವಪ್ರಾಣಿ ಆನಂತರ ಅವಳು ಸ್ತ್ರೀ. ಈ ದೃಷ್ಟಿಯಿಂದ ಮಹಿಳೆಯೇ ಶ್ರೇಷ್ಠ" ಎಂದು ಡಾ.ಜಾನ್‌ಸನ್ ಅಭಿಪ್ರಾಯ ಪಟ್ಟಿದ್ದಾರೆ. ಬಹಳ ಅಲ್ಪ ಕಾಲದಲ್ಲಿಯೇ ಮಹಿಳೆಯು ಪುರುಷನಿಗೆ ಸಮನಾಗಿ ವಿವಿಧ ಕ್ಷೇತ್ರಗಳಲ್ಲಿ ಕೆಲಸ ಮಾಡುವಂಥವಳಾಗಿದ್ದಾಳೆ ಎಂಬುದು ತಿಳಿದಿರುವ ವಿಷಯವೇ. ಆದರೆ ಸಾಮಾಜಿಕ ದೃಷ್ಟಿಯು ಸ್ತ್ರೀಯರ ವಿಷಯದಲ್ಲಿ ಸ್ತ್ರೀ ಪುರುಷ ಸಮಾನತೆಯ ನ್ಯಾಯದಿಂದ ವ್ಯವಹರಿಸಲು ಅವಕಾಶ ಕೊಟ್ಟಿಲ್ಲ. ಎಲ್ಲಾ ದೃಷ್ಟಿಯಿಂದಲೂ ಕೂಡ ಮಹಿಳೆಯನ್ನು ಎರಡನೇ ದರ್ಜೆಯ ಸ್ಥಾನದಲ್ಲಿಯೇ ಇರಿಸಲಾಗಿದೆ. ಇದರಿಂದ ಸ್ತ್ರೀಯು ನಿಜವಾದ ಮಾನವೀಯ ಜೀವನದಿಂದ ವಂಚಿತಳಾಗಿದ್ದಾಳೆ. ಇಲ್ಲಿ ಮುಖ್ಯವಾಗಿ ನಾಟಿವೈದ್ಯ ಪದ್ದತಿಯೂ ಒಂದು ಸಮಾಜದ ಒಂದು ಪ್ರಮುಖ ವಲಯವಾಗಿದ್ದು ಈ ವಲಯದಲ್ಲಿಯೂ ಕೂಡ ಮಹಿಳೆಯರು ಪ್ರವೇಶವನ್ನು ಪಡೆದಿದ್ದಾರೆ. ಈ ನಾಟಿ ವೈದ್ಯ ಪದ್ದತಿಯಲ್ಲಿ ತೊಡಗಿರುವವರು ಹೆಚ್ಚಾಗಿ ಕೆಳ ಮತ್ತು ಮಧ್ಯಮ ವರ್ಗದ ಕುಟುಂಬದವರು. ಮೇಲ್ವರ್ಗದ ಕುಟುಂಬಗಳಲ್ಲಿ ಈ ವೈದ್ಯ ಪದ್ಧತಿಯನ್ನು ಅನುಸರಿಸುವವರು ಕಂಡುಬಂದರೂ ಸಹ ಅವರ ಸಂಖ್ಯೆ ಅತೀ ವಿರಳ.

ಈ ವೈದ್ಯ ವೃತ್ತಿಯನ್ನು ಅನುಸರಿಸುತ್ತಿರುವ ಮಹಿಳೆಯರು ಸಾಮಾಜಿಕವಾಗಿ ಗೌರವ ಸ್ಥಾನಗಳನ್ನು ಹೊಂದಿರುತ್ತಾರೆ ನಿಜ. ಆದರೆ ಈ ಗೌರವಾದರಗಳೂ ಶಾಶ್ವತವಾಗಿರುವುದಿಲ್ಲ. ಬದಲಾಗಿ ಸಮಯ ಸಂದರ್ಭಕ್ಕೆ ತಕ್ಕಂತೆ ಬದಲಾಗುತ್ತಿರುತ್ತವೆ. ಅಂದರೆ ಯಾವುದೇ ಒಂದು ರೋಗಕ್ಕೆ ಚಿಕಿತ್ಸೆಯನ್ನು ನೀಡಿದ ನಂತರ ಆ ಚಿಕಿತ್ಸೆ ಫಲಕಾರಿಯಾದರೆ ಆ ಸಂದರ್ಭದಲ್ಲಿ ಅವಳು ಉತ್ತಮ ಗೌರವಗಳಿಗೆ ಪಾತ್ರಳಾಗುತ್ತಾಳೆ. ಬದಲಾಗಿ ಚಿಕಿತ್ಸೆ ಫಲಕಾರಿಯಾಗದೇ ವಿಫಲವಾದರೆ ಸಮಾಜದಿಂದ ಕುಟುಂಬದಿಂದ ಧೂಷಿಸಲ್ಪಡುತ್ತಾಳೆ. ಹಾಗಾಗಿ ಮಹಿಳೆಗೆ ಈ ಎರಡೂ ಸಂದರ್ಭಗಳನ್ನು ಹೆಚ್ಚಾಗಿ ಎದುರಿಸಬೇಕಾಗಿರುತ್ತದೆ. ಈ ಹಿಂದೆಯೇ ಹೇಳಿದಂತೆ ನಾಟಿ ವೈದ್ಯಪದ್ದತಿಯನ್ನು ಕೆಳ ಮತ್ತು ಮಧ್ಯಮ ವರ್ಗದವರ ಕುಟುಂಬಗಳಲ್ಲಿ ಹೆಚ್ಚಾಗಿ ಕಾಣಲಾಗುತ್ತದೆ. ಈ ವರ್ಗದ ಕುಟುಂಬಕ್ಕೆ ಮೇಲ್ವರ್ಗದ ಕುಟುಂಬಗಳು ಚಿಕಿತ್ಸೆಗಾಗಿ ಬರುವುದು ತೀರಾ ಕಡಿಮೆ. ಏಕೆಂದರೆ ಗೌರವ ಪ್ರತಿಷ್ಠೆಗಳು ಅಡ್ಡಿಯುಂಟಾಗುತ್ತವೆ. ಕೆಲವು ತೀರಾ ಅವಶ್ಯಕ ಸಂದರ್ಭದಲ್ಲಿ ಬರುವುದನ್ನು ಕಾಣುತ್ತೇವೆ. ಹಾಗೆಯೇ ಅಧಿಕಾರದಿಂದ ಚಿಕಿತ್ಸೆಯನ್ನು ಪಡೆಯುತ್ತಾರೆ. ಅದೇ ಉನ್ನತವರ್ಗದ ಮಹಿಳೆಯರು ಈ ಚಿಕಿತ್ಸಾ ಪದ್ಧತಿಯನ್ನು ನೀಡುತ್ತಿದ್ದಾರೆ. ಇವರ ಹತ್ತಿರ ಕೆಳವರ್ಗದವರು ಚಿಕಿತ್ಸೆಯನ್ನು ಪಡೆಯಲು ಹೆದರುತ್ತಾರೆ. ಹಿಂಜರಿಯುತ್ತಾರೆ. ಒಂದು ಉದಾಹರಣೆಯನ್ನು ಕೊಡುವುದಾದರೆ "ರಾತ್ರಿಯಲ್ಲಿ ಮಲಗಿದ ನಂತರ ಒಬ್ಬ ಹುಡುಗನ ಕಿವಿಗೆ ಹಾವು ಕಚ್ಚಿರುತ್ತದೆ. ಅದು ಯಾವುದೋ ಒಂದು ಹುಳು ಕಚ್ಚಿದೆ ಎಂದು ಸುಮ್ಮನಿದ್ದುಬಿಡುತ್ತಾರೆ.

ಆದರೆ ಸ್ವಲ್ಪ ಸಮಯದ ನಂತರ ಅವನ ದೇಹ ಸ್ಥಿತಿಯಲ್ಲಿ ಬದಲಾವಣೆಗಳಾದಾಗ ತನ್ನ ತಂದೆ ತಾಯಿಗೆ ಈ ವಿಷಯ ತಿಳಿಸುತ್ತಾನೆ. ಅವರು ತಮ್ಮ ಮಗುವನ್ನು ಉನ್ನತ ವರ್ಗದಲ್ಲಿನ ಮಹಿಳೆಯರು ಚಿಕಿತ್ಸೆಯನ್ನು ನೀಡುವವರಲ್ಲಿಗೆ ಕರೆದುಕೊಂಡು ಹೋದರೆ ಅಲ್ಲಿ ಅವರು ಆ ಮಗುವನ್ನು ಮುಟ್ಟಿಯೂ ನೋಡದೆ ಕೇವಲ ಮಗುವಿನ ಮುಖವನ್ನು ದೂರದಿಂದಲೇ ಪರೀಕ್ಷಿಸಿ ಈ ಮಗುವಿಗೆ ಚಿಕಿತ್ಸೆ ನೀಡಿದರೆ ಫಲಕಾರಿಯಾಗುವುದಿಲ್ಲ. ಆಸ್ಪತ್ರೆಗೆ ತೆಗೆದುಕೊಂಡು ಹೋಗಿ ಎಂದು ಹೇಳುತ್ತಾರೆ. ಅವರಿಗೆ ಮರು

ಉತ್ತರವನ್ನು ನೀಡದೆ ಅಥವಾ ಪ್ರಶ್ನಿಸದೇ ಆ ಮಗುವನ್ನು ಆಸ್ಪತ್ರೆಗೆ ಕರೆದೊಯ್ಯುವ ಮಾರ್ಗ ಮಧ್ಯದಲ್ಲಿಯೇ ಅಸುನೀಗಿಬಿಡುತ್ತಾನೆ. ಅದೇ ರೀತಿಯಲ್ಲಿ ನಾಟಿ ವೈದ್ಯಪದ್ಧತಿ ಚಿಕಿತ್ಸೆಯನ್ನು ನೀಡುವವರು ಕೆಳವರ್ಗಗಳಲ್ಲಿಯೇ ಇದ್ದಾರೆ. ಇಂತಹ ಪ್ರಕರಣಗಳಿಗೆ ಸಂಬಂಧಿಸಿದಂತೆ ತುಂಬಾ ನಾಜೂಕಾಗಿ ಎಚ್ಚರಿಕೆಯಿಂದ ಚಿಕಿತ್ಸೆಯನ್ನು ನೀಡುತ್ತಿದ್ದರು. ಪ್ರಾಣಕ್ಕೆ ಅಪಾಯ ಎದುರಾಗಿದ್ದರೂ ಸಹ ದೇವರ ಮೇಲೆ ಭಾರವನ್ನು ಹಾಕಿ ಚಿಕಿತ್ಸೆಯನ್ನು ನೀಡುತ್ತಿದ್ದರು. ಇಂತಹ ಪ್ರಕರಣಗಳು ಕೆಲವು ಯಶಸ್ವಿಯಾಗಿವೆ ಮತ್ತು ಕೆಲವು ವಿಫಲವಾಗಿವೆ. ಆದರೆ ಮುಖ್ಯನಾಗಿ ಇಲ್ಲಿ ಏನು ಹೇಳಲು ಬಯಸಲಾಗಿದೆ ಎಂದರೆ ಉನ್ನತ ವರ್ಗದಲ್ಲಿ ಚಿಕಿತ್ಸೆಯನ್ನು ನೀಡುವವರು ಸಮಾಜದ ಕೆಳವರ್ಗ ಮತ್ತು ಮಧ್ಯಮ ವರ್ಗಗಳಿಂದ ಯಾವುದೇ ರೀತಿಯ ಗೌರವಗಳಿಗೆ ಪಾತ್ರರಾಗಿರುವುದಿಲ್ಲ. ಗೌರವಗಳಿಗೆ ಪಾತ್ರರಾಗಿದ್ದರೂ ಸಹ ಅದು ಕೇವಲ ತಾತ್ಕಾಲಿಕವಾಗಿರುತ್ತದೆ. ಮುಂದೆ ಬಂದರೆ ಗೌರವಿಸುವ ಮತ್ತು ಹಿಂದಿನಿಂದ ತೆಗಳುವ ಪ್ರಸಂಗಗಳು ಹೆಚ್ಚಾಗಿ ಕಂಡುಬರುತ್ತವೆ. ಈ ಸಾಮಾಜಿಕ ಸ್ಥಾನಮಾನಗಳು ಎಲ್ಲಾ ಮಹಿಳೆಯರಿಗೂ ಒಂದೇ ರೀತಿಯಲ್ಲಿ ಇರುವುದಿಲ್ಲ. ಏಕೆಂದರೆ ಕೆಲವರು ಪುರುಷರಿಂದ ಒಳ್ಳೆಯ ಸ್ಥಾನಮಾನಗಳನ್ನು ಪಡೆದುಕೊಂಡರೆ ಕೆಲವರು ತಮ್ಮ ಸ್ವಂತ ಕೃಷಿಯಿಂದ ಒಳ್ಳೆಯ ಸ್ಥಾನಮಾನಗಳನ್ನು ಪಡೆದುಕೊಂಡಿರುತ್ತಾರೆ. ಅಂದರೆ ಪುರುಷರಿಂದ ಅಥವಾ ಪುರುಷರ ಸಹಕಾರದಿಂದ ಗುರುತಿಸಿಕೊಂಡ ಮಹಿಳೆಯರು ಹಲವಾರು ಕಟ್ಟುಪಾಡುಗಳಿಗೆ ಒಳಗಾಗಿರುತ್ತಾರೆ. ಇವರಿಗೆ ಯಾವುದೇ ರೀತಿಯ ಸ್ವಾತಂತ್ರ್ಯ ಎಂಬುದು ಇರುವುದಿಲ್ಲ. ಈ ರೀತಿಯ ಪರಿಸ್ಥಿತಿಯಲ್ಲಿ ಉನ್ನತ ವರ್ಗದ ಮಹಿಳೆಯರನ್ನು ಕಾಣಬಹುದಾಗಿದೆ. ಆದರೆ ತಮ್ಮ ಸ್ವಯಂ ಕೃಷಿಯಿಂದ ಗುರುತಿಸಿಕೊಂಡವರು ಯಾವುದೇ ನಿಯಮಗಳಿಗೆ ಬದ್ಧರಾಗದೇ ಸ್ವಲ್ಪಮಟ್ಟಿನ ಸ್ವಾತಂತ್ರ್ಯವನ್ನು ತಮ್ಮದಾಗಿಸಿಕೊಂಡಿರುತ್ತಾರೆ. ಮತ್ತು ಇವರು ತಮ್ಮ ಜೀವನಕ್ಕೆ ಈ ವೈದ್ಯ ವೃತ್ತಿಯನ್ನು ಆಪ್ತವಾಗಿಸಿಕೊಂಡಿರುತ್ತಾರೆ. ಕೆಲವು ಸಂದರ್ಭದಲ್ಲಿ ಈ ನಾಟಿ ವೈದ್ಯ ವೃತ್ತಿಯಲ್ಲಿ ತೊಡಗಿರುವವರು ಕೇವಲ ತಮ್ಮ ಹಳ್ಳಿಗೆ ಮಾತ್ರ ಸೀಮಿತವಾಗಿರದೆ ಸುತ್ತಮುತ್ತಲಿನ ಹತ್ತಾರು ಹಳ್ಳಿಗಳವರೆಗೂ ತಮ್ಮನ್ನೂ ತಾವು ಗುರುತಿಸಿಕೊಂಡಿರುತ್ತಾರೆ. ಹೀಗಾಗಿ ಕೆಲವು ಮಹಿಳೆಯರು ಜನಜನಿತವಾಗಿರುತ್ತಾರೆ.

ಮಹಿಳೆಯನ್ನು ಸಮಾಜವು ಸ್ವತಂತ್ರ ಸ್ವಾಯತ್ತ ಘಟಕವಾಗಿ ಪರಿಭಾವಿಸಿಕೊಳ್ಳದೇ ಅವಳನ್ನು ಪರಿಶಿಷ್ಟವಾಗಿ, ಅನುಬಂಧವಾಗಿ, ಉಪಾಯವಾಗಿ ಪರಿಭಾವಿಸಿಕೊಂಡಿರುವುದನ್ನು ನಾವು ಸರಳವಾಗಿ ಗುರುತಿಸಬಹುದಾಗಿದೆ. ಇನ್ನೂ ಮುಂದೆ ಹೋಗಿ ಹೇಳಬೇಕೆಂದರೆ ಮಹಿಳೆಯನ್ನು ತಾಯಿಯಾಗಿ, ಹೆಂಡತಿಯಾಗಿ, ಕುಟುಂಬಕ್ಕೆ ಸಂವಾದಿಯಾಗಿ ಪರಿಭಾವಿಸಿಕೊಳ್ಳಲಾಗಿದೆ. ಹೆಂಡತಿಯನ್ನು ಅನೇಕ ಗಂಡಂದಿರು ನನ್ನ ಕುಟುಂಬವೆಂದು ಪರಿಚಯಿಸುವುದು ರೂಢಿಯಲ್ಲಿದೆ. ಮಹಿಳೆಯರನ್ನು ಒಬ್ಬ ವ್ಯಕ್ತಿಯಾಗಿ, ಜೀವಿಯಾಗಿ ಪರಿಭಾವಿಸಿಕೊಳ್ಳುವ ಕ್ರಮವಿಲ್ಲ."[5] ಮಹಿಳೆಯನ್ನು ಜೈವಿಕ ನಿಯತಿಯ ಪ್ರಕೃತಿಯ ನೆಲೆಯಲ್ಲಿ ಪರಿಭಾವಿಸಿಕೊಳ್ಳುತ್ತಿರುವುದರಿಂದಾಗಿ ಅವಳು ಸಂಗೋಪನೆಗೆ, ಪರಿಪಾಲನೆಗೆ, ಸಂತಾನೋತ್ಪತ್ತಿಗೆ ಜವಾಬ್ದಾರಳಾಗಿರುತ್ತಾಳೆ. ಹಾಗಾಗಿ ಅವಳು ಪ್ರಧಾನ ನೆಲೆಗೆ ಗುರುತಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಈ ನಾಟಿ ವೈದ್ಯ ಪದ್ಧತಿಯನ್ನು ಅನುಸರಿಸುವಂತಹ ಮಹಿಳೆಯರೂ ಸಹ ತಮ್ಮ

ಹಕ್ಕುಗಳನ್ನು ಎಲ್ಲಿಯೂ ಕೂಡ ಸ್ವತಂತ್ರವಾಗಿ ಚಲಾಯಿಸುವುದನ್ನು ಮಾನ್ಯಮಾಡಿಲ್ಲ. ಕೆಲವು ನಿರ್ದಿಷ್ಟ ಮತ್ತು ವಿಶಿಷ್ಟ ಕಾಯಿಲೆಗಳಿಗೆ ಸಂಬಂಧಿಸಿದಂತೆ ಚಿಕಿತ್ಸೆಯನ್ನು ನೀಡುವಂತಹ ಮಹಿಳೆಯರು ಹೆಚ್ಚು ಜನಜನಿತರಾಗಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ.

ಒಟ್ಟಿನಲ್ಲಿ ಸಮಾಜದ ಇತರ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳಿಗಿಂತ ಈ ನಾಟಿ ವೈದ್ಯ ಪದ್ಧತಿಯ ಚಿಕಿತ್ಸೆಯನ್ನು ನೀಡುವ ಮಹಿಳೆಯರ ಸಾಮಾಜಿಕ ಸ್ಥಾನಮಾನಗಳು ಭಿನ್ನವಾಗಿಲ್ಲ. ಇವರು ವಿಶೇಷವಾದ ಒಂದು ಬಗೆಯ ವಿಧಾನದಿಂದ ಗುರುತಿಸಲ್ಪಟ್ಟರೂ ಸಾಮಾನ್ಯ ಮಹಿಳೆಯರ ಜೀವನ ಸ್ಥಿತಿಗತಿಗಳಂತೆಯೇ ಇವರೂ ಸಹ ಜೀವಿಸುತ್ತಿದ್ದಾರೆ.

**೨.೩.೨. ಆರ್ಥಿಕ ಸ್ಥಿತಿಗತಿಗಳು**

ಇಂದು ಮಹಿಳೆಯನ್ನು ಸಮಾಜ ಜ್ಞಾನಶಿಸ್ತುಗಳು ಪರಿಭಾವಿಸಿಕೊಂಡಿರುವ ನೆಲೆಯಲ್ಲೇ ಮಹಿಳೆಯರ ಆರ್ಥಿಕ ಸ್ಥಿತಿಗತಿಗಳನ್ನು ಕುರಿತಂತೆ ಚರ್ಚೆಮಾಡಬೇಕಿದೆ. ಇಲ್ಲಿ ಆರ್ಥಿಕತೆಯ ದುಡಿಮೆಯನ್ನು ಅವಲಂಬಿಸಿರುತ್ತದೆ. ಹಾಗಾಗಿ ಮೊದಲು ಮಹಿಳೆಯ ದುಡಿಮೆಯ ಬಗ್ಗೆ ತಿಳಿದುಕೊಳ್ಳಬೇಕಾಗಿದೆ. ಕುಟುಂಬಕ್ಕೆ, ಜೈವಿಕತೆಗೆ, ಭಾವನಿಷ್ಟತೆಗೆ, ಸಂಗೋಪನೆಗೆ ಸಂವಾದಿಯನ್ನಾಗಿ ಮಾಡಿದ ಪರಿಣಾಮವಾಗಿ ಮಹಿಳೆಯು ದುಡಿಮೆಯ ಹಕ್ಕಿನಿಂದಲೂ ವಂಚಿತಳಾಗಿದ್ದಾಳೆ. ಸಮಾಜ ವಿಜ್ಞಾನಗಳು ದುಡಿಮೆಯನ್ನು ಸಂಪಾದನೆ, ಮಾರುಕಟ್ಟೆ, ಉತ್ಪಾದನೆಗಳ ನೆಲೆಯಲ್ಲಿ ಪರಿಭಾವಿಸಿಕೊಂಡಿವೆ. ಮಾರುಕಟ್ಟೆಯ ಕ್ರಯ, ವಿಕ್ರಯ, ಉತ್ಪಾದನೆ, ಸಂಪಾದನೆಗಳ ಗುಣಗಳಿಂದ ದೂರವಾದ ಮಹಿಳೆಯರ ದುಡಿಮೆಯು ದುಡಿಮೆಯೆನಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಕೇವಲ ಚಟುವಟಿಕೆಯೆಂದು, ಜೈವಿಕ ಕ್ರಿಯೆಯೆಂದೂ ಪರಿಗಣಿಸಲ್ಪಟ್ಟಿದೆ. ಮಹಿಳೆಯರ ಚಟುವಟಿಕೆಗಳು ಕುಟುಂಬದ ನಾಲ್ಕು ಗೋಡೆಗಳ ನಡುವಿನ ಅವಕಾಶಕ್ಕೆ ಸೀಮಿತಗೊಂಡಿರುವುದರಿಂದ ಅದು ದುಡಿಮೆಯಲ್ಲಿ, ಮನೆಯ ಹೊರಗೆ, ಕಛೇರಿ, ಕಾರ್ಖಾನೆಗಳಲ್ಲಿ ಮಾರುಕಟ್ಟೆ, ಸಂಪಾದನೆ, ಉತ್ಪಾದನೆಗೆ ಸಂಬಂಧಿಸಿದಂತೆ ಮಹಿಳೆಯರು ದುಡಿಮೆಮಾಡಿದರೂ ಅದು ಕೇವಲ ಪೂರಕವಾದ, ಪ್ರಾಸಂಗಿಕವಾದ ದುಡಿಮೆಯೇ ವಿನಃ ಶುದ್ಧವಾದ ಅರ್ಥದಲ್ಲಿ ದುಡಿಮೆಯಲ್ಲ. ಹಾಗಾಗಿ ನಾಟಿವೈದ್ಯಚಿಕಿತ್ಸೆಯನ್ನು ನೀಡುವಂತಹ ಮಹಿಳೆಯರ ದುಡಿಮೆಯನ್ನು ದುಡಿಮೆ ಎಂದು ಪರಿಗಣಿಸುತ್ತಿಲ್ಲ. ಬದಲಾಗಿ ಅವಳ ಕರ್ತವ್ಯ ಎಂದು ಗುರುತಿಸಲಾಗುತ್ತದೆ. ಮುಖ್ಯವಾಗಿ ಇವರು ನೀಡುವಂತಹ ಚಿಕಿತ್ಸೆಗೆ ಯಾವುದೇ ಪ್ರತಿಫಲಾಪೇಕ್ಷೆಯನ್ನು ಆಶಿಸದೇ ಇರುವುದು ಅಂದರೆ ಚಿಕಿತ್ಸೆಯನ್ನು ನೀಡಿದ್ದಕ್ಕೆ ಹಣವನ್ನು ತೆಗೆದುಕೊಳ್ಳದೇ ಇರುವುದರಿಂದ ವರಮಾನದ ಮಾಪನದಿಂದ ಇವರ ದುಡಿಮೆ ದೂರ ಉಳಿಯುತ್ತದೆ. ಮತ್ತು ಈ ಮಹಿಳೆಯರ ಆರ್ಥಿಕ ಸ್ಥಿತಿಗತಿಗಳೂ ಸಹ ತುಂಬಾ ಚಿಂತಾಜನಕವಾಗಿರುತ್ತವೆ. ಈ ವೈದ್ಯ ಚಿಕಿತ್ಸೆಯನ್ನು ಹೆಚ್ಚಾಗಿ ಒಂದು ಹವ್ಯಾಸವಾಗಿ ಅಥವಾ ಒಂದು ಉಪಕಸುಬಾಗಿ ತೆಗೆದುಕೊಂಡಿದವರಾಗಿರುವುದರಿಂದ ಈ ವೃತ್ತಿಯಿಂದ ಅತೀಯಾದ ನಿರೀಕ್ಷೆಗಳನ್ನು ಹೊಂದಿರುವುದಿಲ್ಲ. ಹಾಗಾಗಿ ಇವರ ಆರ್ಥಿಕತೆಯ ಈ ವೃತ್ತಿಯನ್ನು ಅವಲಂಬಿಸಿರುವುದಿಲ್ಲ. ಬದಲಾಗಿ ಈ ವೃತ್ತಿಯು ಜೊತೆಜೊತೆಗೆ ಬೇರೆ ಬೇರೆ ಕೆಲಸಕಾರ್ಯಗಳಲ್ಲಿ ತೊಡಗಿಕೊಂಡಿರುತ್ತಾರೆ.

ಈ ವೃತ್ತಿಯನ್ನು ಮಾಡುತ್ತಿರುವ ಮಹಿಳೆಯರು ಕುಟುಂಬದಲ್ಲಿನ ಬಿಗಿಹಿಡಿತಗಳಿಂದ ಬಂಧಿಸಲ್ಪಟ್ಟಿರುತ್ತಾರೆ. ಹಾಗಾಗಿ ಇವರು ಯಾವುದೇ ಮೂಲದಿಂದ ಆದಾಯವನ್ನು ಸಂಗ್ರಹಿಸಿದರೂ ಸಹ ಅದರ ಮೇಲೆ ಮಹಿಳೆಯರು ಹಿಡಿತವನ್ನು ಸಾಧಿಸಿರುವುದಿಲ್ಲ ಬದಲಾಗಿ ಕುಟುಂಬದಲ್ಲಿನ ಹಿರಿಯ ವ್ಯಕ್ತಿ ಅಂದರೆ ಯಜಮಾನ ಅಧಿಕಾರವನ್ನು ಚಲಾಯಿಸಿರುತ್ತಾನೆ. ಇಲ್ಲಿ ಮುಖ್ಯವಾಗಿ ಈ ವೈದ್ಯ ಚಿಕಿತ್ಸೆಯನ್ನು ನೀಡುವಂತಹ ಮಹಿಳೆಯರು ಆರ್ಥಿಕವಾಗಿ ಸಬಲರಾಗಿರುವುದಿಲ್ಲದನ್ನು ಕಾಣುತ್ತೇವೆ. ಲಿಂಗ ಸಂಬಂಧಿ ಶ್ರಮವಿಭಜನೆಯು ಮಹಿಳೆ ಮತ್ತು ಪುರುಷರ ನಡುವಿನ ಅಧಿಕಾರಸಂಬಂಧಿ ಅಸಮಾನತೆಯನ್ನು ತೀವ್ರಗೊಳಿಸುತ್ತದೆ. ಅನೇಕ ಸ್ತ್ರೀವಾದಿಗಳು ಪ್ರತಿಪಾದಿಸಿರುವಂತೆ ಇಲ್ಲಿ ಎರಡು ಸಂಗತಿಗಳು ಕೆಲಸ ಮಾಡುತ್ತಿವೆ. ಮೊದಲನೆಯದು ಪುರುಷಶಾಹಿತ್ವ ಮತ್ತು ಎರಡನೆಯದು ಬಂಡವಾಳಶಾಹಿ, ವಾಸ್ತವವಾಗಿ ಪುರುಷಶಾಹಿತ್ವವನ್ನು ಬಂಡವಾಳಶಾಹಿಪೂರ್ವ ವ್ಯವಸ್ಥೆಯಲ್ಲೂ ಮತ್ತು ಬಂಡವಾಳಶಾಹಿ ನಂತರದ ವ್ಯವಸ್ಥೆಯಲ್ಲೂ ಕಾಣಬಹುದಾಗಿದೆ. ಇವೆರಡೂ ಸಂಗತಿಗಳು ಕೂಡಿ ಮಹಿಳೆಯರ ದುಡಿಮೆಗೆ ಸಂಬಂಧಿಸಿದಂತೆ ಅನೇಕ ಮಿತಿಗಳನ್ನು ರೂಪಿಸಿಬಿಟ್ಟಿವೆ. ಮಹಿಳೆಯರು ಸಾಮಾನ್ಯವಾಗಿ ಅನೌಪಚಾರಿಕ ಅಸಂಘಟಿತ ಉದ್ಯೋಗಗಳಲ್ಲಿ ನಿರತರಾಗಿರುತ್ತಾರೆ. ಇದಕ್ಕೆ ಹಲವಾರು ಅಧ್ಯಯನಗಳು ದೃಢಪಡಿಸಿವೆ. ಕಡಿಮೆ ಕೂಲಿಯ, ಕಡಿಮೆ ಅಂತಸ್ತಿನ, ಕಡಿಮೆ ಕುಶಲತೆಯ ಕಡಿಮೆ ಅಧಿಕಾರದ ದುಡಿಮೆಗಳಲ್ಲಿ ಮಹಿಳೆಯರು ಮುಗಿಬಿದ್ದಿರುವುದರ ಹಿಂದೆ ಪುರುಷಶಾಹಿತ್ವ ಕೆಲಸ ಮಾಡುತ್ತಿದೆ. ಬಂಡವಾಳಶಾಹಿ ವ್ಯವಸ್ಥೆಯು ಮಹಿಳೆಯ ಕೂಲಿಯನ್ನು ಕೆಳಮಟ್ಟದಲ್ಲಿಟ್ಟುಕೊಂಡು ಶೋಷಿಸುತ್ತದೆ. ಗುತ್ತಿಗೆ ಆಧಾರದ ಮೇಲೆ ಮಹಿಳೆಯರಿಗೆ ಮನೆಯಲ್ಲೇ ದುಡಿಯುವಂತಹ ಕೆಲಸಗಳನ್ನು ನೀಡಿ ಅವರನ್ನು ಶೋಷಿಸಲಾಗುತ್ತಿದೆ.

ಇಂದು ಪ್ರತಿಯೊಂದು ಗ್ರಾಮಗಳಲ್ಲಿಯೂ ಸಹ ಸ್ತ್ರೀಶಕ್ತಿ ಸಂಘಗಳು, ಮಹಿಳಾ ಸ್ವಸಹಾಯ ಸಂಘಗಳು ರೂಪಿತಗೊಂಡಿರುವುದನ್ನು ನಾವು ಕಾಣುತ್ತೇವೆ. ವಂಶಪಾರಂಪರ್ಯವಾಗಿ ನಾಟಿ ಔಷಧಿ ಪದ್ಧತಿಯನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದವರು ಕೆಲವರಾದರೆ ಈ ಸ್ತ್ರೀ ಶಕ್ತಿ ಸಂಘಗಳನ್ನು ಕಟ್ಟಿಕೊಳ್ಳುವುದರ ಮೂಲಕ ತಮ್ಮ ಸಬಲೀಕರಣವನ್ನು ಸಾಧಿಸಿಕೊಳ್ಳುವಲ್ಲಿ ಹಲವಾರು ಮಾರ್ಗೋಪಾಯಗಳನ್ನು ಹೊಂದಿರುವ ಮತ್ತು ಅವುಗಳಲ್ಲಿ ಈ ನಾಟಿ ಔಷಧ ಪದ್ಧತಿಯನ್ನು ಅನುಸರಿಸುವವರು ಕೆಲವರಾಗಿದ್ದಾರೆ. ಈ ಸಂಘಗಳು ಇಂದು ಈ ನಾಟಿ ಪದ್ಧತಿಯಿಂದಾಗಿ ಹಲವಾರು ಔಷಧಗಳನ್ನು ತಯಾರಿಸಿ ಮಾರುಕಟ್ಟೆಯಲ್ಲಿ ಬಿಡುಗಡೆ ಮಾಡುತ್ತಿವೆ. ಇಂದು ಸಂಘ ಸಂಸ್ಥೆಗಳಿಂದ ತಯಾರಾದಂತಹ ನಾಟಿ ಔಷಧಗಳು ಬೆಲೆಬಾಳುವಂತಹ ಗುಣಗಳನ್ನು ಹೊಂದಿ ಸ್ತ್ರೀಯರು ಆರ್ಥಿಕವಾಗಿ ಬಲಿಷ್ಟರಾಗಲು ಸಹಕಾರಿಯಾಗಿರುವುದನ್ನು ಕಾಣುತ್ತೇವೆ. ವಾಣಿಜ್ಯ ಉದ್ದೇಶಕ್ಕಾಗಿ ಈ ನಾಟಿ ವೈದ್ಯ ಪದ್ಧತಿ ಬಳಕೆಯಾಗುತ್ತಿರುವುದು ಒಂದು ಕಡೆಯಾದರೆ ಯಾವುದೇ ವಾಣಿಜ್ಯ ಉದ್ದೇಶಗಳನ್ನು ಹೊಂದದೇ ಯಾವುದೇ ಪ್ರತಿಫಲಪೇಕ್ಷೆ ಇಲ್ಲದೆ ಈ ನಾಟಿ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವವರು ಇನ್ನೊಂದು ಕಡೆ ಕಂಡುಬರುತ್ತಾರೆ.

ಈ ನಾಟಿವೈದ್ಯ ಪದ್ಧತಿಯ ಚಿಕಿತ್ಸೆಯನ್ನು ನೀಡುವವರು ಇಂದು ನಗರ ಅಥವಾ ಪಟ್ಟಣದ ಜೀವನವನ್ನು ಅನುಭವಿಸುತ್ತಿದ್ದರೂ ಸಹ ಇವರ ಆರ್ಥಿಕ ಸ್ಥಿತಿ ಬದಲಾಗದಿರುವುದು ಕಂಡುಬರುತ್ತದೆ.

ಕೆಲವರು ಸ್ತ್ರೀಶಕ್ತಿ ಸಂಘಗಳನ್ನು ಕಟ್ಟಿಕೊಳ್ಳುವುದರ ಮೂಲಕ ಆರ್ಥಿಕವಾಗಿ ಬಲಿಷ್ಠರಾಗಿರುವುದನ್ನು ಮತ್ತು ಆ ನಿಟ್ಟಿನಲ್ಲಿ ಪ್ರಯತ್ನಿಸುತ್ತಿರುವುದನ್ನು ಸಹ ಇಂದು ನಾವು ಕಾಣುತ್ತಿದ್ದೇವೆ. ಆದರೆ ಇವರು ಯಾವುದೇ ಆಸ್ತಿಪಾಸ್ತಿಯನ್ನು ಹೊಂದಿದವರಲ್ಲ. ಇತ್ತೀಚೆಗೆ ಈ ಆಸ್ತಿಪಾಸ್ತಿ, ಹಣದ ಉಳಿತಾಯದ ಕಡೆ ಹೆಚ್ಚಿನ ಗಮನವನ್ನು ಹರಿಸುತ್ತಿದ್ದಾರೆ.

ಒಟ್ಟಿನಲ್ಲಿ ಈ ನಾಟಿವೈದ್ಯ ಪದ್ಧತಿಯ ಚಿಕಿತ್ಸೆಯನ್ನು ನೀಡುವಂತಹ ಮಹಿಳೆಯರು ಆರ್ಥಿಕವಾಗಿ ಬಲಿಷ್ಟರಾಗದೇ ಇರುವುದನ್ನು ಕಾಣುತ್ತೇವೆ. ಆದರೂ ಸಹ ಇತ್ತೀಚಿನ ಜಾಗತೀಕರಣಕ್ಕೆ ಸಿಲುಕಿ ಈ ಮಹಿಳೆಯರು ರಾಷ್ಟ್ರೀಯ, ಅಂತರಾಷ್ಟ್ರೀಯ ಮಾರುಕಟ್ಟೆಯವರೆಗೂ ಕೂಡ ತಮ್ಮ ಪ್ರತಿಭೆಯನ್ನು ಕೊಂಡೊಯ್ಯುತ್ತಿದ್ದಾರೆ ಎಂಬುದು ಗಮನಾರ್ಹ ಸಂಗತಿಯಾಗಿದೆ.

### ೨.೩.೩. ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತಿಗತಿಗಳು

ಈ ನಾಟಿ ವೈದ್ಯಪದ್ಧತಿಯನ್ನು ಅನುಸರಿಸುತ್ತಿರುವ ಮಹಿಳೆಯರು ರಾಜಕೀಯವಾಗಿ ಮುಂದುವರೆಯುವುದು, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದು ಬಂದಿದೆ. ರಾಜಕೀಯ ವ್ಯವಸ್ಥೆಯ ಬಗ್ಗೆ ಇವರಿಗೆ ಒಂದು ರೀತಿಯ ತಾತ್ಸಾರ ಮನೋಭಾವವಿದೆ. ಮತ್ತು ಈ ಮಹಿಳೆಯರು ಯಾವುದೇ ರಾಜಕೀಯ ಸಮಾವೇಶಗಳು ಅಥವಾ ಗ್ರಾಮಪಂಚಾಯ್ತಿ ಸಭೆಗಳಲ್ಲಿ ಭಾಗವಹಿಸದೇ ಇರುವುದನ್ನು ಕಾಣುತ್ತೇವೆ. ಈ ರಾಜಕೀಯದ ಪ್ರವೇಶದ ಬಗ್ಗೆ ಪ್ರಶ್ನಿಸಿದಾಗ "ಹೆಣ್ಣು ಮಕ್ಕಳಿಗೆ ಯಾಕ ಬೇಕ್ರಿ ರಾಜಕೀಯ, ಅದನ್ನು ನೋಡಿಕೊಂಡ ಹೋಗಾಕ ನಮ್ಮ ಮನಿ ಗಂಡಸ್ರು ಇದಾರ" ಎಂಬಂತಹ ಉತ್ತರಗಳು ದೊರೆತವು. ಕೆಲವರಿಗೆ ರಾಜಕೀಯಕ್ಕೆ ಪ್ರವೇಶ ಪಡೆಯಬೇಕು ಎಂಬ ಆಶಯಗಳಿದ್ದರೂ ಸಹ ಕುಟುಂಬದಲ್ಲಿನ ಬಿಗಿ ಹಿಡಿತದಿಂದಾಗಿ ತಮ್ಮ ಆಸೆಯನ್ನು ತಮ್ಮಲ್ಲಿಯೇ ನಿಯಂತ್ರಿಸಿಕೊಳ್ಳುತ್ತಿದ್ದಾರೆ. ಮಹಿಳಾ ಸ್ವ ಸಹಾಯ ಸಂಘಗಳನ್ನು ಕಟ್ಟಿಕೊಂಡವರು ರಾಜಕೀಯ ಪ್ರವೇಶಕ್ಕೆ ದುಂಬಾಲು ಬಿದ್ದಿದ್ದಾರೆ. ಆದರೆ ಇವರಿಗೆ ಪ್ರೋತ್ಸಾಹ ಕೊಡುವವರು, ಬೆಂಬಲ ಕೊಡುವವರು ಇಲ್ಲವಾಗಿದ್ದಾರೆ. ಒಟ್ಟಿನಲ್ಲಿ ರಾಜಕೀಯ ಪ್ರವೇಶದಿಂದ ದೂರ ಉಳಿದಿರುವ ಈ ನಾಟಿವೈದ್ಯ ಪದ್ಧತಿಯ ಚಿಕಿತ್ಸೆಯನ್ನು ನೀಡುವ ಮಹಿಳೆ ಇಂದು ಹಲವಾರು ಸರಕಾರಿ ಯೋಜನೆಗಳಿಂದ ಅಥವಾ ಸರಕಾರಿ ಸೌಲಭ್ಯಗಳಿಂದ ವಂಚಿತರಾಗಿರುವುದನ್ನು ಕಾಣುತ್ತೇವೆ. ಇವರು ಕೇವಲ ಊರುಗಳಲ್ಲಿ ಜನರಿಂದ ನಾಟಿ ವೈದ್ಯರು ಎಂದು ಗುರುತಿಸಿಕೊಳ್ಳುವುದನ್ನು ಬಿಟ್ಟರೆ ಬೇರಾವ ಗೌರವ ಸ್ಥಾನಮಾನಗಳು ಇಲ್ಲವಾಗಿವೆ.

ಗ್ರಾಮೀಣ ಭಾಗಗಳಲ್ಲಿನ ಮಹಿಳೆಯರು ಹೆಚ್ಚಾಗಿ ಅನಕ್ಷರಸ್ಥರು. ಇವರು ವಿದ್ಯೆಗೆ ಹೆಚ್ಚಿನ ಮಹತ್ವವನ್ನು ಕೊಡದೇ ಇರುವುದರಿಂದ ಮತ್ತು ಕುಟುಂಬದ ಬಿಗಿಯಾದ ಕಪಿಮುಷ್ಟಿಯಲ್ಲಿ ಬಂದಿಸಲ್ಪಟ್ಟಿದ್ದರಿಂದ ಇವರು ಯಾವುದೇ ಅಭಿವೃದ್ಧಿಯತ್ತ ಮುಖಮಾಡದೇ ಇರುವುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ವ್ಯಕ್ತಿಗೆ ಶಿಕ್ಷಣವು ಜ್ಞಾನ ಹಾಗೂ ತಿಳುವಳಿಕೆ ನೀಡುತ್ತದೆ. ಸಮಾಜದಲ್ಲಿ ಆದರ್ಶಪ್ರಾಯವಾಗಿ ಬದುಕಲು ಅಗತ್ಯವಾದ ಕೌಶಲ್ಯವನ್ನು ಕೊಡುತ್ತದೆ. ಶಿಕ್ಷಣ ಸಂಸ್ಥೆಗಳು ಪ್ರತ್ಯೇಕವಾದ ಸಂಸ್ಥೆಗಳಾಗಿರದೆ ಸಮಾಜದ ಅವಿಭಾಜ್ಯವಾದ ಸಂವೇದನಾಶೀಲ ಭಾಗವಾಗಿವೆ.

ಈ ಶಿಕ್ಷಣ ಪದ್ಧತಿಯು ಸಮಾಜದ ನೀತಿ, ನಿಯಮ, ಮೌಲ್ಯಗಳ ಪ್ರಭಾವವನ್ನು ಒಳಗೊಂಡಿದೆ. ಮುಖ್ಯವಾಗಿ ವ್ಯಕ್ತಿ ತನ್ನನ್ನು ತಾನು ತಿಳಿಯಲು ಬುದ್ಧಿಶಕ್ತಿಯನ್ನು ಬೆಳಿಸಿಕೊಳ್ಳಲು, ಜೀವನದ ಪರಿಸ್ಥಿತಿಯನ್ನು ಉತ್ತಮಪಡಿಸಲು ಶಿಕ್ಷಣ ಅತ್ಯಗತ್ಯವಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಕುಟುಂಬ ಹಾಗೂ ಸಮಾಜದಲ್ಲಿ ಸಾಮರಸ್ಯ, ಶಾಂತಿ, ನೆಮ್ಮದಿ, ನೆಲೆಸುವಂತೆ ಮಾಡಲು ಶಿಕ್ಷಣ ಅಗತ್ಯವಾಗಿದೆ ಹಾಗೂ ಅನಿವಾರ್ಯವೂ ಆಗಿದೆ. ಆದರೆ ಇಂಥದೊಂದು ಸಂಸ್ಥೆಯಿಂದ ಸ್ತ್ರೀಯರನ್ನು ಸಂಪೂರ್ಣವಾಗಿ ಹೊರಗಿಟ್ಟಕಾರ್ಯ ಪುರುಷಕೇಂದ್ರಿತ ವ್ಯವಸ್ಥೆಯದಾಗಿದೆ. "ಮಾನವ ಇತಿಹಾಸದ ಸಾವಿರಾರು ವರ್ಷಗಳಿಂದಲೂ ಸ್ತ್ರೀಯರು ಪುರುಷರೊಂದಿಗೆ ಸಮಾಜದ ಏಳಿಗೆಗಾಗಿ ಶ್ರಮಿಸಿದ್ದಾರೆ. ಆದರೆ ಪುರುಷರು ಮಾತ್ರ ಸ್ತ್ರೀಯರನ್ನು ತಮಗೆ ಸಮಾನರಾದ ವ್ಯಕ್ತಿಗಳೆಂದು ಪರಿಗಣಿಸಿಲ್ಲ. ತಮಗಿಂತ ಬುದ್ಧಿವಂತಿಕೆಯುಳ್ಳ ಸ್ತ್ರೀಯರಿಗಿಂತ ತಮ್ಮನ್ನು ಎತ್ತರದಲ್ಲಿರಿಸಿಕೊಳ್ಳಬೇಕೆಂಬ ಅಸೂಯೆ, ಛಲದಿಂದ ಪುರುಷರು ಕ್ರಮೇಣ ಅವರ ಬುದ್ಧಿ ಪರಿತವಾಗದಂತೆ ಕಾಯ್ದುಕೊಂಡು ಬಂದಿದ್ದಾರೆ. ವೇದ, ಉಪನಿ,ತ್ತು, ಮಹಾಕಾವ್ಯ ಮತ್ತು ಸ್ಮೃತಿಗಳು ಆರ್ಯ ಸಂಸ್ಕೃತಿಯ ಮೂಲಾಧಾರವೆಂದು ಹೇಳಲಾಗಿದೆ. ಇಂದಿಗೂ ಇವುಗಳೇ ಸಮಾಜ ವ್ಯವಸ್ಥೆಯನ್ನು ನಿರ್ಧರಿಸುವ ಅಂಶಗಳಾಗಿವೆ. ಅದೇ ರೀತಿ ಇವುಗಳ ಪ್ರಭಾವ ವಲಯದಲ್ಲಿಯೇ ಮಹಿಳೆಯರ ಜೀವನವನ್ನು ಕೂಡ ರೂಪಿಸಲಾಗಿದೆ. ವೈದಿಕ ಸಮಾಜದಲ್ಲಿ ಮಹಿಳೆಯರು ಅತ್ಯುನ್ನತ ಶಿಕ್ಷಣ, ಸ್ಥಾನಮಾನಗಳನ್ನು ಹೊಂದಿದ್ದರೆಂದು ಹೇಳಲಾಗುತ್ತಿದೆ. ಆದರೆ ವಾಸ್ತವವಾಗಿ ವಿವಿಧ ವೇದಗಳಲ್ಲಿ ಮಹಿಳೆಯರ ಪಾತ್ರವನ್ನು ವಿಭಿನ್ನವಾಗಿ ಚಿತ್ರಿಸಲಾಗಿದೆ."[9]

ಪುರುಷಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಬೌದ್ಧಿಕತೆ, ಸೃಜನಶೀಲತೆಯ ಹಿನ್ನೆಡೆಯಾಗುವಂತಹ ವಾತಾವರಣ ಈ ಶಿಕ್ಷಣ ವ್ಯವಸ್ಥೆಯಲ್ಲಿ ಕಂಡುಬರುತ್ತದೆ. ಲಿಂಗ ತಾರತಮ್ಯದ ಶಿಕ್ಷಣ ಚಿಂತನೆಯು ಸಾಮಾಜಿಕ ಸಂರಚನೆಯಲ್ಲಿ ಬೇರುಬಿಟ್ಟಿದೆ. ಅಂದರೆ ಕೌಟುಂಬಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ನೆಲೆಗಳಲ್ಲಿ ಪಕ್ಷಪಾತದ ಧೋರಣೆಗಳಿಂದ ಮಹಿಳಾ ಶಿಕ್ಷಣ ನಿರೀಕ್ಷಿತ ವೇಗದಲ್ಲಿ ಮುಂದುವರೆಯುತ್ತಿಲ್ಲ. ಹಾಗಾಗಿ ಈ ನಾಟಿವೈದ್ಯ ಚಿಕಿತ್ಸೆಯನ್ನು ನೀಡುವಂತಹ ಮಹಿಳೆಯರೂ ಸಹ ಈ ಎಲ್ಲಾ ಅಂಶಗಳಿಂದ ಮುಕ್ತರಾಗಿಲ್ಲ. ಅಂದರೆ ಇವರ ಶಿಕ್ಷಣವನ್ನು ಕಡಿತಗೊಳಿಸಿದುದರ ಬಗ್ಗೆ ಕೆಲವು ಅಂಶಗಳು ಗೋಚರಿಸುತ್ತವೆ. ಮುಖ್ಯವಾಗಿ ಕುಟುಂಬದಿಂದಲೇ ಮಹಿಳೆಯರ ಬಗೆಗಿನ ತಾರತಮ್ಯಗಳು ಉದ್ಭವಿಸುತ್ತವೆ. ಅಂದರೆ ಶಿಕ್ಷಣದ ಕುರಿತ ಲಿಂಗತಾರತಮ್ಯ ಹೆಣ್ಣು ಮಗು ಹುಟ್ಟಿದಂದಿನಿಂದಲೇ ಪ್ರಾರಂಭವಾಗುತ್ತದೆ. ಗಂಡುಮಕ್ಕಳಿಗೆ ಅಕ್ಷರಾಭ್ಯಾಸವೆಂಬ ಸಂಸ್ಕಾರದೊಂದಿಗೆ ಶಿಕ್ಷಣದ ಸೌಲಭ್ಯ ಪ್ರಾರಂಭವಾಗುತ್ತದೆ. ಆದರೆ ಹೆಣ್ಣು ಮಕ್ಕಳಿಗೆ ವಿವಾಹವಾಗಲು ತಕ್ಕಷ್ಟು ವಿದ್ಯಾಭ್ಯಾಸ, ಕಲೆ, ಗೃಹಕೃತ್ಯಗಳು ಸಾಕು ಎಂದು ಪೋಷಕರು ಭಾವಿಸುತ್ತಾರೆ. ಹಾಗೆಯೇ ಹೆಣ್ಣು ಮಗುವಿಗೆ ಕುಟುಂಬವೊಂದೇ ಇಡೀ ಪ್ರಪಂಚವಾಗಿ ರೂಪುಗೊಳ್ಳುತ್ತದೆ. ಆದರೆ ಗಂಡುಮಗುವಿಗೆ ಕುಟುಂಬದ ಜೊತೆಗೆ ಹೊರಗಿನ ಪ್ರಪಂಚವನ್ನು ನೋಡಲು ಅವಕಾಶಮಾಡಿಕೊಡಲಾಗುತ್ತದೆ. ಹೀಗೆ ಕುಟುಂಬದಿಂದಲೇ ಆರಂಭವಾಗುವ ಈ ಲಿಂಗತಾರತಮ್ಯದಿಂದಾಗಿ ಮಹಿಳೆಯರು ಎಲ್ಲಾ ವಲಯಗಳಲ್ಲಿಯು ಪುರುಷನ ಅಧೀನದಲ್ಲಿಯೇ ಜೀವಿಸುವಂತಹ ಪರಿಸ್ಥಿತಿ ಕಂಡುಬರುತ್ತಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ವೈದ್ಯ ವೃತ್ತಿಯನ್ನು ಅನುಸರಿಸುತ್ತಿರುವ ಮಹಿಳೆಯರ ಶಿಕ್ಷಣದ ಬಗ್ಗೆ ವಿಚಾರಿಸಿದಾಗ ಅವರು ಕೇವಲ ೬,೭ನೇ ತರಗತಿಯವರೆಗೆ ಓದಿರುವುದು ಕಂಡುಬಂದಿದೆ. ಕೆಲವರು ಏನೂ ಓದದೆಯೂ ಈ ವೈದ್ಯಪದ್ಧತಿಯಲ್ಲಿ ತೊಡಗಿರುವುದನ್ನು ಕಾಣಲಾಗಿದೆ. ಈ ಮಹಿಳೆಯರು ಕುಟುಂಬದಿಂದ ಮತ್ತು ಸಮಾಜದಿಂದ ಶಿಕ್ಷಣಕ್ಕೆ ಸಂಬಂಧಿಸಿದಂತೆ ಅನೇಕ ಸೌಲಭ್ಯಗಲಿಂದ ವಂಚಿತರಾಗಿರುವುದನ್ನು ಕಾಣಲಾಗುತ್ತಿದೆ. ಆದರೆ ಹಲವಾರು ಸ್ವಯಂ ಸೇವಾ ಸಂಸ್ಥೆಗಳ ಪ್ರೇರಣೆಯಿಂದಾಗಿ, ಪ್ರೋತ್ಸಾಹದಿಂದಾಗಿ ಇಂದು ಈ ವೈದ್ಯಪದ್ಧತಿಯ ಮಹಿಳೆಯರು ಸ್ತ್ರೀ ಶಕ್ತಿ ಸಂಘಗಳು ಮತ್ತು ಮಹಿಳಾ ಸಂಘಗಳನ್ನು ಕಟ್ಟಿಕೊಂಡು ಶಿಕ್ಷಣವನ್ನು ಕಲಿಯಲು ಮುಂದಾಗುತ್ತಿದ್ದಾರೆ. ಇದರಿಂದ ಅವರ ಸಬಲೀಕರಣದ ಕಡೆಗೆ ಹೆಚ್ಚಿನ ಗಮನಹರಿಸಿದ್ದಾರೆ.

ಒಟ್ಟಿನಲ್ಲಿ ಈ ವೈದ್ಯ ವೃತ್ತಿಯನ್ನು ಅನುಸರಿಸುತ್ತಿರುವ ಮಹಿಳೆಯರು ಯಾವುದೇ ರೀತಿಯಲ್ಲಿ ಸ್ವತಂತ್ರ ಜೀವಿಯಾಗಿ ಬಾಳುತ್ತಿರುವುದು ಕಂಡುಬರುವುದಿಲ್ಲ. ಕೌಟುಂಬಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಎಲ್ಲಾ ವಲಯಗಳಲ್ಲಿಯೂ ಕೂಡ ಅವಕಾಶಗಳಿಂದ ವಂಚಿತಳಾಗಿದ್ದಾಳೆ. ಹಾಗೂ ಮಹಿಳೆ ಪುರುಷ ಚಿಂತನೆಯಲ್ಲಿ ನಲುಗುತ್ತಿದ್ದಾಳೆ. ಹಾಗಾಗಿ ಈ ವೈದ್ಯಪದ್ಧತಿಯಲ್ಲಿನ ಮಹಿಳೆಯರು ಸಮಾಜದ ಮೇಲ್‌ಸ್ತರದಲ್ಲಿ ಬರಲು ಈ ಪುರುಷಶಾಹಿ ಚಿಂತನೆಗಳು ಅಡ್ಡಿಪಡಿಸುತ್ತಿವೆ. ಮಹಿಳೆಯರ ಅಧಿಕಾರ, ಸ್ವತಂತ್ರ್ಯವನ್ನೆಲ್ಲಾ ಕಿತ್ತುಕೊಂಡು ಅವಳನ್ನು ಒಂದು ವಸ್ತುವಿನಂತೆ ಕಾಣುತ್ತಿರುವುದು ವಾಸ್ತವ ಸತ್ಯ. ಈ ವ್ಯವಸ್ಥೆಗೆ ಈ ನಾಟಿ ವೈದ್ಯ ಪದ್ಧತಿಯನ್ನು ಅವಲಂಬಿಸಿದ ಮಹಿಳೆಯರೂ ಸಹ ಒಳಗೊಳ್ಳುತ್ತಿದ್ದಾರೆ.

**ಅಡಿಟಿಪ್ಪಣಿಗಳು**

೧. ವೈದ್ಯಪದ್ಧತಿಗಳ ಅಂತರಂಗ, ಟಿ.ಸಿದ್ದಪ್ಪ, ಪುಟ.೦೧, ೦೨, ೦೩, ೦೪.

೨. ಶಿಳ್ಳೇಕ್ಯಾತ, ಸಣ್ಣವೀರಣ್ಣ ದೊಡ್ಡಮನಿ, ಪುಟ.೬೯

೩. ಮಹಿಳೆ ಶೋಷಣೆ-ಸವಾಲುಗಳು, ವಿಜಯಶ್ರೀ ಸಬರದ, ಪು.೧೦೩.

೪. ಮಹಿಳಾ ಸಾಮಾಜಿಕತೆ, ಜ್ಯೋತಿ ಶಶಿಕುಮಾರ, ಪುಟ.೮೩.

## ಅಧ್ಯಾಯ-೩

# ನಾಟಿವೈದ್ಯ ಪದ್ಧತಿ: ರೋಗ ಮತ್ತು ನಿವಾರಣಾ ವಿಧಾನಗಳು

೩.೧. ಮಹಿಳೆಯರಿಗೆ ಸಂಬಂಧಿಸಿದ ಕಾಯಿಲೆಗಳು ಮತ್ತು ನಿವಾರಣಾ ವಿಧಾನಗಳು

೩.೨. ಮಕ್ಕಳಿಗೆ ಸಂಬಂಧಿಸಿದ ಕಾಯಿಲೆಗಳು ಮತ್ತು ನಿವಾರಣಾ ವಿಧಾನಗಳು

೩.೩. ಸಾಮಾನ್ಯ ಹಾಗೂ ವಿಶಿಷ್ಟ ಕಾಯಿಲೆಗಳು ಮತ್ತು ನಿವಾರಣಾ ವಿಧಾನಗಳು

# ಅಧ್ಯಾಯ ೩

## ನಾಟಿವೈದ್ಯ ಪದ್ಧತಿ: ರೋಗ ಮತ್ತು ನಿವಾರಣಾ ವಿಧಾನಗಳು

"ಊಟಬಲ್ಲವನಿಗೆ ರೋಗವಿಲ್ಲ, ಮಾತು ಬಲ್ಲವನಿಗೆ ಜಗಳವಿಲ್ಲ" ಎಂಬ ಗಾದೆ ನಾವು ಸೇವಿಸುವ ಆಹಾರಕ್ಕೂ ನಮ್ಮ ಆರೋಗ್ಯಕ್ಕೂ ಇರುವ ಗಾಢವಾದ ಸಂಬಂಧವನ್ನು ಪ್ರತಿಫಲಿಸುತ್ತದೆ. ಇಂದು ವೈದ್ಯಕೀಯ ಪ್ರಪಂಚದಲ್ಲಿ ಪಾಶ್ಚಾತ್ಯರ ಪ್ರಭಾವ ಹೆಚ್ಚಾಗಿರುವುದರಿಂದ ಅಲೋಪತಿ ವೈದ್ಯವಿಧಾನ ಹೆಚ್ಚು ಜನಪ್ರಿಯವಾಗಿದೆ. ಅದು ಬಿಟ್ಟರೆ ಭಾರತದಲ್ಲಿಯೇ ಮೊದಲಿನಿಂದ ಬೆಳೆದು ಬಂದಿರುವ ಆಯುರ್ವೇದಿಕ್ ಪದ್ಧತಿ ತಕ್ಕಮಟ್ಟಿಗೆ ಬಳಕೆಯಲ್ಲಿದೆ. ಯುನಾನಿ, ಹೋಮಿಯೋಪತಿ ಮೊದಲಾದ ಇತರ ವೈದ್ಯವಿಧಾನಗಳೂ ಬಳಕೆಯಲ್ಲಿವೆ. ನಾಗರಿಕತೆಯ ಫಲವಾಗಿ ಪ್ರಾಬಲ್ಯಕ್ಕೆ ಬಂದ ಈ ಎಲ್ಲ ವೈದ್ಯ ವಿಧಾನಗಳ ಕಾರಣದಿಂದ ಜನಪದರೂ ನಾಟಿ ವೈದ್ಯ ಕೇವಲ ಮೂಡನಂಬಿಕೆ ಎಂಬ ಅಭಿಪ್ರಾಯಕ್ಕೆ ಬಂದು ಹೆಚ್ಚು ಹೆಚ್ಚಾಗಿ ಅಲೋಪತಿ, ಆಯುರ್ವೇದ ಮೊದಲಾದ ವೈದ್ಯ ವಿಧಾನಗಳಿಗೆ ಶರಣು ಹೋಗಿದ್ದಾರೆ. ಆದರೆ ಗ್ರಾಮೀಣ ಭಾಗಗಳಲ್ಲಿ ಇಂದಿಗೂ ನಾಟಿ ವೈದ್ಯ ಪದ್ಧತಿ ರೂಢಿಯಲ್ಲಿದ್ದು ಜನರು ಅದರ ಉಪಯುಕ್ತತೆಯನ್ನು ಇಂದಿಗೂ ಪಡೆದುಕೊಳ್ಳುತ್ತಿದ್ದಾರೆ. ಇಂದು ಮಾನವನು ಹಲವಾರು ರೋಗರುಜಿನಿಗಳಿಂದ ಬಳಲುತ್ತಿದ್ದಾನೆ. ತಾನು ಸೇವಿಸುವ ಆಹಾರದಿಂದ ಹಿಡಿದು ತಾನು ನಿರ್ವಹಿಸುವ ದಿನನಿತ್ಯದ ಚಟುವಟಿಕೆಗಳವರೆಗೆ ತನಗೆ ಗೊತ್ತಿಲ್ಲದಂತೆಯೇ ಅನಾರೋಗ್ಯಕ್ಕೆ ಒಳಗಾಗುತ್ತಾನೆ. ಮುಖ್ಯವಾಗಿ ಮಹಿಳೆಯ ಆಹಾರ ಪೋಷಣೆಯನ್ನು ಗಮನಿಸಿದರೆ, ಅವಳ ಆಹಾರವು, ಅವಳ ಶಾರೀರಿಕ ಬೆಳವಣಿಗೆಗೆ, ದೈನಂದಿನ ಚಟುವಟಿಕೆಗಳಿಗೆ ಬೇಕಾಗುವ ಶಕ್ತಿಯನ್ನು ಪೂರೈಸಲು ಮಾತ್ರವಲ್ಲದೇ ಅವಳ ಮುಟ್ಟು, ಬಸಿರು, ಬಾಣಂತಿತನಗಳ ಅವಧಿಯಲ್ಲಿ ಬೇಕಾಗುವ ಎಲ್ಲಾ ಪೋಷಕಾಂಶಗಳನ್ನು ಸರಿಪ್ರಮಾಣದಲ್ಲಿ ಒದಗಿಸಬೇಕು. ಹಾಗಾಗದಿದ್ದಲ್ಲಿ ಮಹಿಳೆಯು ನ್ಯೂನ ಪೋಷಣೆಗೆ ಒಳಗಾಗಿ ಅವಳ ಆರೋಗ್ಯ ಕೆಡುತ್ತದೆ. ಅವಳು ಶೈಶವ ಅಥವಾ ಬಾಲ್ಯ ಅಥವಾ ಹದಿಹರೆಯದಲ್ಲಿದ್ದಲ್ಲಿ ಅವಳ ದೈಹಿಕ ಬೆಳವಣಿಗೆ ಕುಂಠಿತವಾಗುತ್ತದೆ. ಜೊತೆಗೆ ಪೋಷಕಾಂಶಗಳ ಕೊರತೆಯಿಂದುಂಟಾಗುವ ರಕ್ತಹೀನತೆಯಂಥಹ ರೋಗಗಳು, ಸೋಂಕುಗಳು ಮತ್ತಿತರ ಕಾಯಿಲೆಗಳು ಅವಳನ್ನು ಮುತ್ತಿ ಕಾಡುತ್ತವೆ. ಹಾಗೆಯೇ

ಮಕ್ಕಳಿಗೂ ಸಹ ಹಲವಾರು ಕಾಯಿಲೆಗಳು ಕಾಡುತ್ತಿರುತ್ತವೆ. ಈ ನಿಟ್ಟಿನಲ್ಲಿ ಮನುಷ್ಯನಿಗೆ ಸಾಮಾನ್ಯ ಕಾಯಿಲೆಗಳಿಂದ ಹಿಡಿದು ವಿಶಿಷ್ಟವಾದ ರೋಗವನ್ನು ಗುಣಪಡಿಸಲಾಗದ ಕಾಯಿಲೆಗಳೂ ಸಹ ಕಾಡುತ್ತಿರುತ್ತವೆ. ಈ ಎಲ್ಲಾ ಕಾಯಿಲೆಗಳಿಗೂ ನಾಟಿ ವೈದ್ಯ ಪದ್ಧತಿಯಲ್ಲಿ ಚಿಕಿತ್ಸೆ ಇರುವುದರಿಂದ ಈ ಕಾಯಿಲೆಗಳನ್ನು ಹೇಗೆ ನಿವಾರಿಸಿಕೊಳ್ಳಬಹುದು ಮತ್ತು ಆ ನಿವಾರಣಾ ವಿಧಾನಗಳು ಯಾವುವು ಎಂಬುದನ್ನು ತಿಳಿದುಕೊಳ್ಳುವುದು ಸೂಕ್ತವೆನಿಸಿರುವುದರಿಂದ ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

ರೋಗ ವಿಧಾನ(Diagnosis)ದ ಪ್ರಾಮುಖ್ಯತೆಯನ್ನು ಕ್ರಿ.ಪೂ.೧೦೦೦ವರ್ಷಗಳ ಹಿಂದೆಯೇ ಬ್ಯಾಬಿಲೋನಿಯನ್ನರು ತಿಳಿದಿದ್ದರು. ನಂತರ ಗ್ರೀಕರು ಅದಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದರು. ಆಧುನಿಕ ವೈದ್ಯಕೀಯದಲ್ಲಿಯೂ ರೋಗ ನಿಧಾನ ಬಹಳ ಮುಖ್ಯ. ರೋಗ ನಿದಾನವೇ ರೋಗಿಯನ್ನು ಗುಣಪಡಿಸುವಲ್ಲಿ ಬಹುಮುಖ್ಯ ಪಾತ್ರವನ್ನು ವಹಿಸಿದೆ. ಅನುಭವ, ಜಾಣ್ಮೆ ಮತ್ತು ಸೂಕ್ಷ್ಮತೆಯಿಂದ ಯಾರು ರೋಗಿಯನ್ನು ಗುರುತಿಸಬಲ್ಲರೋ ಅವರು ಚಿಕಿತ್ಸೆಯಲ್ಲೂ ಫಲಕಾಣುವ ಸಾಧ್ಯತೆ ಹೆಚ್ಚಾಗಿರುತ್ತದೆ. ವೈದ್ಯರಾದವರು ಯಾವುದೇ ಒಂದು ರೋಗ ಚಿಕಿತ್ಸೆಯನ್ನು ಮಾಡುವ ಮೊದಲು ರೋಗ ನಿಧಾನವನ್ನು ಮಾಡಬೇಕಾಗುತ್ತದೆ. ಈ ವೈದ್ಯರು ರೋಗಿಯನ್ನು ಪರೀಕ್ಷಿಸಲು ತಮ್ಮದೇ ಆದ ವಿಧಾನಗಳನ್ನು ಅನುಸರಿಸುತ್ತಾರೆ. ಇದನ್ನು ಹಿರಿಯರಿಂದ ಮತ್ತು ಅನುಭವದಿಂದ ಕಲಿತಿರುತ್ತಾರೆ. ರೋಗ ಪತ್ತೆ ಹಚ್ಚುವ ಕ್ರಮವು ಒಂದು ರೀತಿಯಲ್ಲಿ ಸಂಕೀರ್ಣವಾದದ್ದು. ಅಂದರೆ ಪ್ರದೇಶದಿಂದ ಪ್ರದೇಶಕ್ಕೆ ಮತ್ತು ವೈದ್ಯರಿಂದ ವೈದ್ಯರಿಗೆ ಅದರಲ್ಲಿ ಭಿನ್ನತೆ ಇರುತ್ತದೆ. ಈ ಬಗೆಯ ರೋಗ ಪತ್ಯೆ ಹಚ್ಚುವ ವಿಧಾನವನ್ನು ಪರಿಚಯಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಭಾರತೀಯ ವೈದ್ಯಕ್ಷೇತ್ರದಲ್ಲಿ ರೋಗನಿಶ್ಚಯಕ್ಕಾಗಿ ಎಂಟು ಸ್ಥಾನಗಳನ್ನೂ ಪರೀಕ್ಷಿಸಬೇಕೆಂದು ಹೇಳಲಾಗಿದೆ. "ನಿದಾನೋ ಮಾಧವಃ ಶ್ರೇಷ್ಠ" ಎಂಬ ಉಕ್ತಿ ರೋಗ ಪತ್ಯ ಹಚ್ಚುವ ವಿಧಾನದಲ್ಲಿ ಪ್ರಸಿದ್ಧನಾದ ಮಾಧವಕನೆಂಬ ಆಚಾರ್ಯನನ್ನು ಕುರಿತು ಹೇಳಲಾಗಿದೆ.[*] ಚರಕ ಸಂಹಿತೆಯಲ್ಲಿ ರೋಗ ಪತ್ಯಹಚ್ಚುವ ವಿಧಾನವನ್ನು ಪರಿಚಯಿಸುವ ಒಂದು ಪ್ರತ್ಯೇಕ ವಿಭಾಗವನ್ನು ಕಾಣಬಹುದಾಗಿದೆ. ರೋಗ ಪತ್ಯ ಹಚ್ಚುವುದೆಂಬುದು ಅನುಭವದ ಮಾತೇ ಹೊರತು ಪುಸ್ತಕದ ಪಾಂಡಿತ್ಯವಲ್ಲ ಎಂಬ ಅಭಿಪ್ರಾಯವನ್ನು ತಿರುಕರು ವ್ಯಕ್ತಪಡಿಸುತ್ತಾರೆ. ಈ ಮಾತು ನಾಟಿ ವೈದ್ಯರಿಗೆ ಹೆಚ್ಚು ಹತ್ತಿರವಾದುದು. ಹಾಗಾದರೆ ನಾಟಿ ವೈದ್ಯರೆಲ್ಲರೂ ಅನುಭವಿಗಳೇ ಎಂದು ಭಾವಿಸುವಂತಿಲ್ಲ. ಆದರೂ ಕೆಲವರಲ್ಲಿಯಾದರೂ ಆ ಅನುಭವವನ್ನು ಕಾಣಲು ಸಾಧ್ಯವಿದೆ. ಇಂಥಾ ಅನುಭವವುಳ್ಳವರು ಮನೆಯ ಹಿರಿಯರಿರಬಹುದು. ಇಲ್ಲವೆ ಊರಿನ ದನಗಾಹಿ, ಗ್ರಾಮದೇವತೆಯ ಪೂಜಾರಿ, ಊರೂರು ತಿರುಗುವ ಸುಡುಗಾಡು ಸಿದ್ಧರು ಮತ್ತು ಅನಾಮಿಕ ಸಾದು ಸಂತರಾಗಿರಬಹುದು. ಇವರೆಲ್ಲರೂ ಒಂದಿಲ್ಲೊಂದು ವಿಧದಲ್ಲಿ ಹಿರಿಯರಿಂದ ಅಥವಾ ಗುರುಮುಖೇನ ವೈಜ್ಞಾನವನ್ನು ಕಲಿತು ಅದರ ಜೊತೆಯಲ್ಲಿಯೇ ಅನುಭವವನ್ನು ಗಳಿಸಿಕೊಂಡವರಾಗಿರುತ್ತಾರೆ. ಇಂಥವರು ತಾವು ಅನುಭವಿಗಳು ಎನ್ನುವುದನ್ನು ಹೊರಗೆ ತೋರುಗೊಡುವುದಿಲ್ಲ. "ಬೀಜದೊಳಗುಣ ವೃಕ್ಷದಂತೆ" ಅಗೋಚರವಾಗಿರುತ್ತಾರೆ. ಇದು ನಾಟಿ ವೈದ್ಯರ ಜಾಯಮಾನವೂ ಹೌದು. ಈ ಬಗೆಯ ಸಂಸ್ಕಾರ ಋಷಿ ಮುನಿಗಳಿಂದ ಹಾಗೂ ಸಾಧು

ಸಂತರಿಂದ ದೊರಕೊಂಡಿರುವಂತಹದು. ಈ ಬಗೆಯ ಅನುಭವ ಯಾವುದೇ ವರ್ಗಕ್ಕೆ ಸೀಮಿತವಾದದ್ದಲ್ಲ. ಅದು ವ್ಯಕ್ತಿಗಳ ಪ್ರಯತ್ನ ಮತ್ತು ಪರಿಶ್ರಮದಿಂದ ಬರುವಂತಹುದಾಗಿದೆ.

ರೋಗ ಪತ್ಯದ ಬಗ್ಗೆ ವೈದ್ಯರೊಬ್ಬರ ಅಭಿಪ್ರಾಯ ಹೀಗಿದೆ. "ಆರು ರಸಗಳಿಂದ ಆಗಿರುವುದೇ ಆರೋಗ್ಯ. ಅದರಲ್ಲಿ ಯಾವುದು ಕಡಿಮೆಯಾಗಿದೆ ಎಂಬುದನ್ನು ತಿಳಿದು ಆ ರಸವನ್ನು ದೇಹಕ್ಕೆ ಕೊಟ್ಟರೆ ಸಮತೋಲನ ಬಂದು ರೋಗ ನಿಯಂತ್ರಣಕ್ಕೆ ಬರುತ್ತೇ. ಇದಕ್ಕಾಗಿಯೇ ಪುರಂದರದಾಸರು "ವಿಷವಿಕ್ಕಿದವಗೆ ಷಡ್ರಸವಾನ್ನುಣಿಸಲೇಬೇಕು" ಎಂದಿದ್ದಾರೆ. ಆದಕಾರಣ ಮೊದಲು ರೋಗ ಯಾವುದೆಂದು ಗುರುತಿಸಬೇಕು. ಒಂದು ವೇಳೆ ರೋಗ ಗುರುತಿಸದೇ ಔಷಧಿಯನ್ನು ಕೊಟ್ಟರೆ ಹುತ್ತದ ಒಳಗಿರುವ ಹಾವಿಗೆ ಹುತ್ತದ ಮೇಲೆ ಹೊಡೆದಂತೆ ಎನ್ನುವ ವೈದ್ಯರ ಮಾತು ವೈದ್ಯೋಪಚಾರದಲ್ಲಿ ರೋಗ ಪತ್ಯ ಪಚ್ಚುವ ಪ್ರಾಮುಖ್ಯತೆಯನ್ನು ಮಾರ್ಮಿಕವಾಗಿ ಹೇಳುತ್ತಾರೆ. ಹಾಗೆಯೇ ಅನುಭವವಿಲ್ಲದ ವೈದ್ಯೋಪಚಾರ ಅಧಃಪತನವೆಂಬ ಎಚ್ಚರಿಕೆಯನ್ನು ಕೊಡುತ್ತದೆ.

ಕೆಲವು ರೋಗಗಳನ್ನು ಗುರುತಿಸಲು ಮತ್ತು ಅವುಗಳು ಬಂದಿರುವುದಕ್ಕೆ ಕಾರಣಗಳನ್ನು ತಿಳಿಯಲು ವೈದ್ಯರೇ ಆಗಬೇಕಾಗಿಲ್ಲ. ಮನೆಯ ಹಿರಿಯರು ಹಾಗೂ ಹಳ್ಳಿಯ ಕೆಲವು ಜನರು ಗುರುತಿಸಬಲ್ಲವರಾಗಿರುತ್ತಾರೆ. ವ್ಯಕ್ತಿಯೊಬ್ಬನ ಸಮಸ್ಯೆಯನ್ನು ಗಮನಿಸಿದ ಜನರು ಅದು ಸಾಮಾನ್ಯವಾದ ರೋಗವಾಗಿದ್ದರೆ ತಾವೇ ಅದಕ್ಕೆ ಒಂದು ಸಲಹೆಯನ್ನು ಸೂಚಿಸುತ್ತಾರೆ. ಒಂದು ವೇಳೆ ರೋಗ ಏನೆಂಬುದು ಖಚಿತವಾಗಿ ತಿಳಿಯದಿದ್ದಾಗ ಇಂಥ ವೈದ್ಯರನ್ನು ಬೇಟಿಮಾಡಬೇಕೆಂದು ಸೂಚಿಸುತ್ತಾರೆ. ಇದು ಸಾಮೂಹಿಕ ರೋಗ ಪತ್ಯಹಚ್ಚುವ ಪ್ರಕ್ರಿಯೆಯೂ ಹೌದು. ಇದಕ್ಕೆ ಕೆಲವು ಉದಾಹರಣೆಗಳು: ಮಿತಿಮೀರಿ ಬೀಡಿ ಮತ್ತು ತಂಬಾಕೂ ಸೇವಿಸುವುದರಿಂದ ದಿನದಿಂದ ದಿನಕ್ಕೆ ಒಣಗಿ ಹೋಗುತ್ತಿದ್ದು ನಿರಂತರ ಕೆಮ್ಮುತ್ತಿದ್ದಾರೆ, ಇವರಿಗೆ ಟಿ.ಬಿ. ಬರುತ್ತದೆ ಎಂದೋ ಇಲ್ಲವೋ ಆಗಲೇ ಬಂದಿದೆ ಎಂದೋ ಜನ ತೀರ್ಮಾನಿಸುತ್ತಾರೆ. ಊರಲ್ಲಿ ಯಾರಿಗಾದರೂ ಮಕ್ಕಳಾಗದಿದ್ದರೆ ಅವಳು ಮದುವೆಗೆ ಮುಂಚೆ ಬಸುರಿ ಆಗಿದ್ದು ಅದ್ನ ತೆಗಿಸಿಕೊಂಡಿದ್ದಕ್ಕೆ ಈಗ ಮಕ್ಕಳಾಗಿಲ್ಲ ಎನ್ನುವಲ್ಲಿ ಗರ್ಭಸ್ರಾವದ ವೇಳೆ ಗರ್ಭಕೋಶಕ್ಕಾಗಿರುವ ಹಾನಿಯನ್ನು ನಿಖರವಾಗಿ ಹೇಳಲಾಗದಿದ್ದರೂ ಹಾಗೇ ಮಾಡಿದ್ದು ಕಾರಣವಿರಬಹುದೆಂದು ಊಹಿಸುತ್ತಾರೆ. ಆದರೆ ಗಂಡಸಿನಿಂದಾಗಿ ಮಕ್ಕಳಾಗಲಿಲ್ಲ ಎಂದು ಯಾರೂ ಊಹಿಸದಿರುವುದು ನಮ್ಮ ಸಮಾಜದಲ್ಲಿರುವ ಲಿಂಗತಾರತಮ್ಯದ ಧೋರಣೆಯಾಗಿದೆ ಮಗು ಹಗಲೆಲ್ಲ ಅಳುತ್ತಿದ್ದು ಅದು ಹಾಲುಕುಡಿಯದಿರುವುದನ್ನು ನೋಡಿದವರು ಯಾವುದೋ ಕೆಟ್ಟಕಣ್ಣು ಬಿದ್ದಿರಬೇಕು, ಹೋಗು ಏನಾದ್ರೂ ದೃಷ್ಟಿತೆಗೆದು ಹಾಕು ಎಂದು ಸಲಹೆ ಮಾಡುತ್ತಾರೆ. ಹಾಲು ಕುಡಿಯುವ ಎಳೆಯ ಕೂಸಿಗೆ ಕಾರಣವಿಲ್ಲದೆ ಕೆಮ್ಮು ಮತ್ತು ಶೀತ ಕಾಣಿಸಿ ಕೊಂಡಾಗ ಮನೆಯ ಹಿರಿಯರು ಮಗುವಿನ ತಾಯಿಗೆ "ನೀನು ಬಾಯಿ ಸವಿಗಿ ಏನೇನೋ ತಿನ್ನಬ್ಯಾಡ" ಎಂದು ಎಚ್ಚರಿಸುತ್ತಾರೆ. ಆಹಾರದಲ್ಲಿ ತಾಯಿ ಪಥ್ಯವನ್ನು ಅನುಸರಿಸದಿದ್ದಾಗ ಮಗುವಿನ ಮೇಲಾಗುವ ಕೆಟ್ಟ ಪರಿಣಾಮವನ್ನು ಇಲ್ಲಿ ಗುರುತಿಸುತ್ತಾರೆ. "ಹೆಂಗಸರ ಒಳಕಾಯಿಲೆಗಳ ವಿಚಾರದಲ್ಲಿಯಂತೂ ಅಕ್ಕಪಕ್ಕದ ಮನೆಯ ಹಿರಿಯ ಅಕ್ಕಯ್ಯ ದೊಡ್ಡಮ್ಮ ಅಜ್ಜಿಯರನ್ನೂ ಆಶ್ರಯಿಸುವುದು ಅನಿವಾರ್ಯವಾಗುತ್ತಿತ್ತು ಎನ್ನುವಲ್ಲಿ ರೋಗ

ಪಥ್ಯಹಚ್ಚುವ ವಿಧಾನ ಮತ್ತು ಅದರ ಪರಿಹಾರ ಒಟ್ಟೊಟ್ಟಿಗೆ ಸಾಗುತ್ತಿರುವುದನ್ನು ಹೇಳುತ್ತದೆ. ರೋಗವೊಂದರ ಚಿಹ್ನೆಗಳು ದೇಹದ ಹೊರಗೆ ಕಂಡುಬರುತ್ತಿದ್ದರೆ ಅದನ್ನು ಗುರುತಿಸಲು ಜನರಿಗೆ ಕಷ್ಟವಾಗುವುದಿಲ್ಲ. ಉದಾಹರಣೆಗೆ: ಚರ್ಮಸಂಬಂಧಿ ಕಾಯಿಲೆಗಳು, ಕಿವಿ, ಕಣ್ಣು, ಮೂಗುಗಳಿಗೆ ಸಂಬಂಧಿಸಿದ ತೊಂದರೆಗಳು, ಮೂಳೆಮುರಿತ, ಕಾಮಲೆ, ಜ್ವರ, ಭೇದಿ, ಕೆಮ್ಮು, ವಾಯು, ಮೂರ್ಛೆ ಈ ಮೊದಲಾದವುಗಳ ನಿದಾನಶಾಸ್ತ್ರವನ್ನೂ ಜನಸಾಮಾನ್ಯರು ತಿಳಿದಿರುವ ಉದಾಹರಣೆಗಳಿವೆ. ಕಾಲು ಅಥವಾ ಕೈ ಹೆಬ್ಬೆರಳುಗಳಿಗೆ ಬಲವಾದ ಪೆಟ್ಟುಬಿದ್ದು ಗಾಯವಾಗಿ ಅದು ವಾಸಿಯಾಗುವ ಸೂಚನೆ ಕಂಡುಬರದಿದ್ದರೆ ಅದರಿಂದ ಮೀಟುವಾಯು, ಹುಟ್ಟಿ ಪ್ರಾಣಕ್ಕೆ ಅಪಾಯ ಒದಗಬಹುದೆಂಬ ಎಚ್ಚರಿಕೆ ಜನರಿಗೆ ತಿಳಿದಿರುತ್ತವೆ.

ದೇಹದ ಹೊರಗಿನ ಕಾಯಿಲೆಗಳನ್ನು ಗುರುತಿಸಿದಷ್ಟು ಸುಲಭವಾಗಿ ಅಲ್ಲದಿದ್ದರೂ, ವಿರಳವಾಗಿಯಾದರೂ ದೇಹದೊಳಗಿನ ಮಾನಸಿಕ ರೋಗದ ನಿದಾನವನ್ನು ಜನರು ತಿಳಿದಿರುತ್ತಾರೆ. ರಾತ್ರಿ ಒಬ್ಬಂಟಿಯಾಗಿ ಪ್ರಯಾಣ ಮಾಡಿ ಬಂದವನಿಗೆ ಬೆಳಿಗ್ಗೆ ಎದ್ದಾಗ ಚಳಿಜ್ವರ ಕಾಣಿಸಿಕೊಂಡಿದ್ದರೆ, ಎಲ್ಲಿಯಾದ್ರೂ ಹೆದರಿದೆಯಾ, ಮೈ ಜುಮ್ಮ್ ಎಂದೀತೆ ಎಂದು ಪ್ರಶ್ನಿಸುತ್ತಾರೆ. ಕನಸ್ಸಿನಲ್ಲಿ ಹೆದರಿದವರು ಮತ್ತು ಮನಸ್ಸಿನ ಅಭೀಪ್ಸೆ ಈಡೇರದೆ ಕೊರಗುವವರ ಚಲನವಲನಗಳನ್ನು ಅವಲೋಕಿಸಿ ರೋಗದ ಕಾರಣಗಳನ್ನು ತಿಳಿದು ಅದಕ್ಕೆ ಸಲಹೆ ಕೊಡುವವರು ಇದ್ದಾರೆ. ಉಚಿತವಲ್ಲದ ಜಾಗದಲ್ಲಿ ಬಿದ್ದು ಬಂದವರು ನೋವಿನಿಂದ ನರಳುತ್ತಿದ್ದಾರೆ. ಭೂಮಿ ರಾವು ಬಡಿದಿದೆ, ಗ್ರಹ ಚೇಷ್ಟೇ, ಗಾಳಿಸೋಕು (ಸೋಂಕು) ಇಲ್ಲವೇ ಮೋಹಿನಿಕಾಟ ಅಥವಾ ಬ್ರಹ್ಮರಾಕ್ಷಸಿಕಾಟ ಎಂಬ ನಾಮಾಂಕಿತಗಳನ್ನು ಹೆಸರಿಸಿ ರೋಗಿಯನ್ನು ಮತ್ತಷ್ಟು ತಲ್ಲಣಗೊಳಿಸಿ ರೋಗದ ವ್ಯತೆಗೆ ಕಾರಣವಾಗುವವರೂ ಇದ್ದಾರೆ. ಇದರಿಂದಾಗಿ ಮಾನಸಿಕ ರೋಗ ನಿದಾನದಲ್ಲಿ ಅನುಕೂಲವಿದ್ದಂತೆ ಪ್ರತಿಕೂಲವೂ ಇದೆ.

ಸಾಮಾನ್ಯವಾದ ಹಲವು ಸಮಸ್ಯೆಗಳನ್ನು ಗುರುತಿಸಿ ಅವುಗಳಿಗೆ ಪರಿಹಾರ ಕಂಡುಕೊಳ್ಳುವ ಜ್ಞಾನ ಗ್ರಾಮೀಣ ಸಮುದಾಯಕ್ಕೆ ಪರಂಪರೆಯ ಮೂಲಕ ಸಾಗಿಬಂದಿದೆ ಎಂಬುದನ್ನು ಗಮನಿಸಬಹುದು. ಅಂದರೆ ರೋಗ ನಿದಾನವೆಂಬುದು ವೈದ್ಯರು ಮಾತ್ರ ಮಾಡುವಂತಹುದು ಎಂದು ಭಾವಿಸವಂತಿಲ್ಲ. ಅದು ಶ್ರೀಸಾಮಾನ್ಯರಲ್ಲೂ ಇರುವಂತಹದು ಎನ್ನುವುದನ್ನು ಇದುವರೆಗೂ ನೋಡಲಾಯಿತು.

ನಾಟಿವೈದ್ಯರ ರೋಗನಿದಾನದಲ್ಲಿ ಎಲ್ಲಾ ವೈದ್ಯರು ವಿಶೇಷವಾದ ಪರಿಣತಿಯನ್ನು ಹೊಂದಿರುತ್ತಾರೆಂದು ಹೇಳಲು ಬರುವುದಿಲ್ಲ. ಗುರುವಿನ ಪ್ರಭಾವ ಮತ್ತು ವೈದ್ಯರಲ್ಲಿರುವ ಆಸಕ್ತಿಯಿಂದ ಅದರಲ್ಲಿ ವಿಶೇಷವಾದ ಅನುಭವವನ್ನು ಹೊಂದಿದವರಿದ್ದಾರೆ. ಉಳಿದವರು ಸಾಮೂಹಿಕವಾಗಿ ಪ್ರಚಲಿತದಲ್ಲಿ ಇರುವುದನ್ನೇ ತಿಳಿದವರಿದ್ದಾರೆ. ಅನುಭವಿ ವೈದ್ಯರು ರೋಗಿಯನ್ನು ಪರೀಕ್ಷಿಸುವಾಗ ಹೊರನೋಟಕ್ಕೆ ಕಾಣುವ ಚಿಹ್ನೆಗಳು ಹಾಗೂ ರೋಗಿಯ ಚಲನವಲನಗಳನ್ನು ಗಮನಿಸುವುದು, ರೋಗಿಯನ್ನು ಸ್ಪರ್ಶಿಸುವುದು, ಮಾತನಾಡಿಸುವುದು, ಮುಖಭಾವವನ್ನು ಅವಲೋಕಿಸಿ ಯೋಗದೃಷ್ಟಿಯಲ್ಲಿ ಅವನ ರೋಗ ಯಾವುದೆಂದು ಹೇಳುವ ಮೇಧಾವಿಗಳೂ ಇದ್ದಾರೆ. ಇಂಥ ವೈದ್ಯರು ರೋಗ ದೈಹಿಕವಾದದ್ದೋ

ಅಥವಾ ಮಾನಸಿಕವಾದದ್ದೊ ಎನ್ನುವುದನ್ನು ಮೊದಲು ಖಚಿತಪಡಿಸಿಕೊಳ್ಳುತ್ತಾರೆ. ರೋಗಿಯೂ ನನ್ನನ್ನೇ ನೋಡುತ್ತಿದ್ರೆ ಸ್ವಲ್ಪ ಯೋಚಿಸಿ ನಿರ್ಧಾರ ಮಾಡ್ತೀನಿ. ಮುಖ ತಗ್ಗಿಸಿ ದೃಷ್ಟಿ ಕೆಳಕ್ಕೆ ಹೋಯ್ತು ಅಂದ್ರೆ ತತ್! ಇದು ಮನಸ್ಸಿನಲ್ಲಿ ಹುಟ್ಟಿದ್ದು ಎಂದು ತೀರ್ಮಾನಿಸುತ್ತೇನೆ. ಔಷಧಿ ಕೊಟ್ಟ ನಂತರವೂ ಹೊಟ್ಟೆನೋವು ವಾಸಿಯಾಗದಿದ್ರೆ ಕರುಳಿನ ಮೇಲೆ ಗುಳ್ಳೆ (ಅಲ್ಸರ್) ಆಗಿದೆ ಎಂದರ್ಥ.

ಈ ಮೇಲಿನ ವೈದ್ಯರ ರೋಗ ನಿದಾನವನ್ನೂ ಮತ್ತು ರೋಗದ ಕಾರಣಗಳನ್ನು ತಿಳಿಸುತ್ತದೆ. ವೈದ್ಯರು ರೋಗಿಯ ಬಾಹ್ಯಲಕ್ಷಣಗಳು ಮತ್ತು ಇತರ ಮೂಲಗಳಿಂದ ರೋಗ ಯಾವುದೆಂದು ಅರಿಯುವ ಪ್ರಕ್ರಿಯೆಯನ್ನು ಇಲ್ಲಿ ಕಾಣಬಹುದಾಗಿದೆ.

**೩.೧. ಮಹಿಳೆಯರಿಗೆ ಸಂಬಂಧಿಸಿದ ಕಾಯಿಲೆಗಳು ಮತ್ತು ರೋಗ ನಿವಾರಣಾ ವಿಧಾನ**

**ಗರ್ಭ ನಿಲ್ಲಲು**

ಶಿವಲಿಂಗಪುಷ್ಪದ ಬೀಜ, ಜೀರಿಗೆಯನ್ನು ಅರೆದು ಪುಡಿ ಮಾಡಿಕೊಂಡು ಮುಟ್ಟಾದ ನೀರಾದ ನಂತರ ೨೧ ದಿನಗಳವರೆಗೆ ಹಾಲಿನಲ್ಲಿ ಪುಡಿ ಮಿಶ್ರಣವನ್ನು ಹಾಕಿಕೊಂಡು ಕುಡಿದರೆ ಗರ್ಭ ನಿಲ್ಲುತ್ತದೆ.

**ಗರ್ಭಾಶಯದ ನೋವು**

ನೆಲ್ಲಿಯ ಚೆಟ್ಟು, ಇಲಿಯ ಹಿಕ್ಕೆ, ಸೌಂಪು, ಇಂಗು ಇವುಗಳನ್ನು ನೀರಿನಲ್ಲಿ ಅರೆದು ಕುದಿಸಿ ಹೊಟ್ಟೆಯ ಮೇಲೆ ಹಚ್ಚಿದರೆ ಗರ್ಭಾಶಯದ ನೋವು ಕಡಿಮೆಯಾಗುತ್ತದೆ.

**ಗರ್ಭಿಣಿಯರ ಭೇದಿ**

ಬಿಲ್ವದ ಒಣಗಿದ ತಿರುಳು, ಶುಂಠಿ ಇವುಗಳ ಕಷಾಯದಲ್ಲಿ ಜವೆ ಗೋಧಿಯ ಸ್ವಲ್ಪ ಪುಡಿಯನ್ನು ಹಾಕಿ ಕುಡಿಸಿದರೆ ಭೇದಿಯು ಕಡಿಮೆಯಾಗುತ್ತದೆ.

**ಗರ್ಭಿಣಿಯರಿಗೆ ಆಕಸ್ಮಾತಾಗಿ ಆಗುವ ರಕ್ತಸ್ರಾವ**

ಹಸುವಿನ ತುಪ್ಪವನ್ನು ಶರೀರಕ್ಕೆ ಹಚ್ಚಿದರೆ ರಕ್ತ ಸ್ರಾವ ಕಡಿಮೆಯಾಗುತ್ತದೆ.

**ಬಾಣಂತಿ ಬೇನೆ**

ಕಾಡು ತುಳಸಿ ಬೀಜವನ್ನು ರಾತ್ರಿ ನೆನೆಹಾಕಿ ಬೆಳಿಗ್ಗೆ ಕುಡಿದರೆ ಹಡೆದ ನಂತರ ಉಂಟಾಗುವ ಬೇನೆಯು ಕಡಿಮೆಯಾಗುತ್ತದೆ.

**ಬಾಣಂತಿಯರಿಗೆ ರಕ್ತ ಹೋಗುತ್ತಿದ್ದರೆ**

ಹಾಗಲಕಾಯಿ ತೊಟ್ಟಿನ ರಸವನ್ನು ಕುಡಿಸಿದರೆ ರಕ್ತ ಹೋಗುವುದು ಕಡಿಮೆಯಾಗುತ್ತದೆ.

**ಗರ್ಭಿಣಿಗೆ ಹೆರಿಗೆಯ ಸಮಯದಲ್ಲಿ ನೋವು ಕಾಣಿಸಿಕೊಂಡು ಬೇಗ ಹೆರಿಗೆ ಆಗಲು**

ಜೀರಿಗೆ, ಬೆಳ್ಳುಳ್ಳಿ, ಕರಿಬೇವು, ಮೆಣಸು, ಯಾಲಕ್ಕಿ, ಲವಂಗ ಸ್ವಲ್ಪ ಸಕ್ಕರೆ ಹಾಕಿ ಕಷಾಯ ಮಾಡಿ ಕುಡಿಸಿದರೆ ಹೆರಿಗೆ ಸರಳವಾಗಿ ಆಗುತ್ತದೆ.

ಶಾವಿಗೆ ಬಸಿದ ನೀರನ್ನು ಕುಡಿಸಿದರೆ ಬೇಗ ಹೆರಿಗೆಯಾಗುತ್ತದೆ.

ಜೀರಿಗೆ ಕಷಾಯಕ್ಕೆ ತುಪ್ಪ ಹಾಕಿ ಕುಡಿಸಿದರೆ ಬೇಗ ಹೆರಿಗೆಯಾಗುತ್ತದೆ.

**ಗರ್ಭಿಣಿಯರಿಗೆ ವಾಂತಿಯಾದರೆ**

ಕೊತ್ತಂಬರಿ ಕಷಾಯಕ್ಕೆ ಸಕ್ಕರೆ ಬೆರೆಸಿ ಬಿಸಿ ಮಾಡಿ ಕುಡಿಸಿದರೆ ವಾಂತಿ ಕಡಿಮೆಯಾಗುತ್ತದೆ.

**ಸ್ತ್ರೀಯರ ಮುಟ್ಟುನೋವು ನಿವಾರಣೆಗೆ**

೧. ಒಂದು ಟೀ ಸ್ಪೂನ್ ಕರಿಎಳ್ಳು ಪುಡಿಯನ್ನು ಬಿಸಿ ಹಾಲಿನೊಂದಿಗೆ ಮೂರು ದಿನಗಳು ಸೇವಿಸಿದರೆ ಮುಟ್ಟು ನೋವು ನಿವಾರಣೆಯಾಗುತ್ತದೆ.

೨. ಮೂಲಂಗಿ ಬೀಜವನ್ನು ನುಣ್ಣಗೆ ಅರೆದು ಮಜ್ಜಿಗೆಯಲ್ಲಿ ಕಲಿಸಿ ಕುಡಿಯುವುದರಿಂದ ಮುಟ್ಟು ಕಾಲಕಾಲಕೆ ಆಗುತ್ತಿರುತ್ತದೆ.

೩. ಸೋಂಪು ಕಾಳಿನ ಕಷಾಯವನ್ನು ಜೇನುತುಪ್ಪದೊಂದಿಗೆ ಸೇರಿಸಿ ಕುಡಿಯುವುದರಿಂದ ಮುಟ್ಟಾದಾಗ ಆಗುವ ನೋವು ಕಡಿಮೆಯಾಗುತ್ತದೆ.

೪. ಬದನೆಯ ಗಿಡದಲ್ಲಿ ಬಹಳ ಚಿಕ್ಕ, ಎಳೆಯ ಕಾಯಿಗಳನ್ನು ತಂದು ನೀರಿನೊಡನೆ ಅರೆದು ಸೋಸಿ ಕುಡಿಯುವುದರಿಂದ ಮುಟ್ಟಾದಾಗ ಆಗುವ ರಕ್ತಸ್ರಾವವು ಕಡಿಮೆಯಾಗುತ್ತದೆ.

**ನಿಂತ ಮುಟ್ಟು ಮತ್ತೆ ಆಗಲು**

ಹುರುಳಿ, ಪರಂಗ, ಚಕ್ಕೆ, ಜಡೆ ಹತ್ತಿಯ ಎಲೆ ಇವುಗಳನ್ನು ಕುಟ್ಟಿ ನೀರಿನಲ್ಲಿ ಹಾಕಿ ಕುದಿಸಿ ಬೆಲ್ಲ ಹಾಕಿ ಕುಡಿದರೆ ನಿಂತಿರುವ ಮುಟ್ಟು ಮತ್ತೆ ಪುನಃ ಸರಿಯಾಗಿ ಕಾಲಕಾಲಕ್ಕೆ ಆಗುತ್ತದೆ.

**ಎದೆಹಾಲನ್ನು ನಿಲ್ಲಿಸಲು**

೧. ಸ್ತ್ರೀಯರು ಎದೆಹಾಲನ್ನು ನಿಲ್ಲಿಸಬೇಕಾಗದ ಸಂದರ್ಭವೊದಗಿದಾಗ ಬೇವಿನ ಎಲೆಗಳನ್ನು ಅರೆದು ಸ್ತನಗಳ ಮೇಲೆ ಹಚ್ಚಬೇಕು.

೨. ಜಾಜಿ ಮಲ್ಲಿಗೆಯನ್ನು ಅರೆದು ಅದರ ರಸವನ್ನು ಸ್ತನಗಳ ಮೇಲೆ ಹಚ್ಚಬೇಕು.

೩. ಮೆಂತ್ಯೆ ಸೊಪ್ಪನ್ನು ನುಣ್ಣಗೆ ಅರೆದು ಸ್ತನಗಳ ಮೇಲೆ ಹಚ್ಚಿದರೆ ಎದೆಹಾಲನ್ನು ನಿಲ್ಲಿಸಬಹುದು.

**ಹೆಣ್ಣು ಮಕ್ಕಳು ಮೈನೆರೆದಾಗ ಕೊಡುವ ಔಷಧಿ**

ಕರಿಬೇವಿನ ಸೊಪ್ಪು, ಗಾಳಿಸೊಪ್ಪು, ತುಳಸಿ ಇವಿಷ್ಟನ್ನು ಸೇರಿಸಿ ಕುಟ್ಟಿ ರಸವನ್ನು ತೆಗೆದು ೩ ದಿನ ಬೆಳಗ್ಗೆ ಖಾಲಿಹೊಟ್ಟೆಗೆ ೨ ಟೀ ಚಮದಷ್ಟು ಕುಡಿಯಲು ಕೊಡಬೇಕು.

**ಬಸುರಿ ಇರುವ ಮಹಿಳೆಗೆ**

ಗಾಳಿಸೊಪ್ಪು, ಚಿಕ್ಕಗುಮ್ಮಟೆ, ಗಣಿಕೆ ಸೊಪ್ಪು ಇವುಗಳನ್ನು ಕುಟ್ಟಿ ರಸವನ್ನು ತೆಗೆದುಕೊಡಬೇಕು. ಹೀಗೆ ೩ ತಿಂಗಳವರೆಗೆ ದಿನಕ್ಕೆ ೧ ಬಾರಿಯಂತೆ ಕೊಡಬೇಕು.

**ಬಾಣಂತಿಗೆ ಕೊಡುವ ಔಷಧಿ**

ಪ್ರಸವವಾಗಿ ೯ ದಿನಗಳವರೆಗೆ ಕೊಡುವ ಔಷಧಿ, ಗಾಳಿಸೊಪ್ಪು, ಕರಿಜೀರಿಗೆ ಮತ್ತು ನಂಜನ ಬೀಜಗಳನ್ನು ಅರೆದು ರಸತೆಗೆದು, ತುಪ್ಪದಲ್ಲಿ ಒಗ್ಗರಣೆ ಮಾಡಿ, ಅಡಿಕೆ ಗಾತ್ರದಲ್ಲಿ ಉಂಡೆ ಮಾಡಿ ನೀರಿನಲ್ಲಿ ಬೆರೆಸಿ, ಖಾಲಿ ಹೊಟ್ಟೆಗೆ ಕೊಡಬೇಕು.(ಈ ಔಷಧಿ ಗರ್ಭಕೋಶವನ್ನು ಶುದ್ಧ ಮಾಡುತ್ತದೆ).

**ಋತು ಸ್ರಾವಕ್ಕೆ**

ಮುಟ್ಟಿದರೆ ಮುನಿ ಸೊಪ್ಪನ್ನು ಕುಟ್ಟಿ ಅದನ್ನು ರಕ್ತ ಸ್ರಾವವಾಗುವ ಗಾಯಕ್ಕೆ ಹಚ್ಚಿಕೊಳ್ಳಬೇಕು. ಆಗ ಕಡಿಮೆಯಾಗುತ್ತದೆ.

**ಬಾಣಂತಿಗೆ ಹಾಲು ಬರುವುದಕ್ಕೆ**

ಸೊದ್ದಲು ಬೀಜ (ಜೋಳದ ಬೀಜದಂತ್ತಿರುತ್ತದೆ) ಈ ಬೀಜವನ್ನು ಮೊಳಕೆ ಕಟ್ಟಿ ಅದನ್ನು ೩ಸಲ ಮಂತ್ರಿಸಿ ತಿನ್ನುವುದರಿಂದ ಬಾಣಂತಿಗೆ ಹಾಲು ಬರುತ್ತದೆ. ಹೀಗೆ ಒಂದು ವಾರ ತೆಗೆದುಕೊಳ್ಳಬೇಕು.

**ಎದೆಹಾಲು ಹೆಚ್ಚಾಗಲು**

ಮೆಂತೆ ಹಿಟ್ಟು, ಸೊಪ್ಪನ್ನು ದಿನದ ಊಟಕ್ಕೆ ಬಳಸಿದರೆ ಹೆಚ್ಚಾಗಿ ತಿನ್ನುತ್ತಿದ್ದರೆ ಎದೆಹಾಲು ಹೆಚ್ಚಾಗುತ್ತದೆ.

ಜೀರಿಗೆಯನ್ನು ಚೆನ್ನಾಗಿ ಪುಡಿ ಮಾಡಿ ಹಸುವಿನ ಹಾಲಿಗೆ ಸೇರಿಸಿ ಪ್ರತಿದಿನ ಬೆಳಿಗ್ಗೆ ರಾತ್ರಿ ಕುಡಿಸಿದರೆ ಎದೆಹಾಲು ಹೆಚ್ಚಾಗುತ್ತದೆ.

**ನಿಶ್ಯಕ್ತಿ, ಬಿಳಿಮುಟ್ಟು ಹಸಿವು ಆಗದಿದ್ದರೆ ಹೀಟ್ ಜಾಸ್ತಿ ಇದ್ದರೆ**

**ಲೋಳೆರಸ ಟಾನಿಕ್**

ಲೋಳೆರಸವನ್ನು ಸಣ್ಣಾಗಿ ಕತ್ತರಿಸಿ, ಒಂದು ಕೆ.ಜಿ.ಬೆಲ್ಲ, ಒಂದು ಕೆ.ಜಿ. ಲೋಳೆರಸವನ್ನು ಒಂದು ಭರಣಿಯಲ್ಲಿ ಹಾಕಿ ಒಂದು ತಿಂಗಳವರೆಗೆ ಮುಚ್ಚಿಡಬೇಕು. ಒಂದು ತಿಂಗಳಾದ ನಂತರ ಅದನ್ನು ಸೋಸಬೇಕು. ಸೋಸಿದ ನಂತರ ಅದನ್ನು ಟಾನಿಕ್ ಬಾಟಲ್‌ಗೆ ಹಾಕಿ ಸಿದ್ಧಪಡಿಸುತ್ತಾರೆ. ಇದರಿಂದ ನಿಶ್ಯಕ್ತಿ, ಬಿಳಿಮುಟ್ಟು, ಹಸಿವು ಆಗದೇ ಇರುವುದು, ಹೀಟ್ ಜಾಸ್ತಿ ಇರುವುದಕ್ಕೆ, ಇದನ್ನು ದಿನಕ್ಕೆ ಎರಡು ಸಲ ಸೇವಿಸುವುದರಿಂದ ಈ ಕಾಯಿಲೆಗಳು ಗುಣವಾಗುತ್ತವೆ.

**ಮಾಸ ಬೀಳಲು**

ಹುರುಳಿಯನ್ನು ನೀರಿನಲ್ಲಿ ಕುದಿಸಿ, ನಂತರ ಕೈಯಿಂದ ಕಿವುಚಿ, ಸೋಸಿ ಕುಡಿಸಿದರೆ ಬೇಗ ಮಾಸ ಬೀಳುತ್ತದೆ.

**೩.೨. ಮಕ್ಕಳಿಗೆ ಸಂಬಂಧಿಸಿದ ಕಾಯಿಲೆಗಳು ಮತ್ತು ನಿವಾರಣಾ ವಿಧಾನಗಳು**

**ಹುಟ್ಟಿದ ಮಗುವಿಗೆ ಕೊಡುವ ಔಷಧಿ**

೧. ಹುಟ್ಟಿದ ತಕ್ಷಣ ಸೀರೆಯನ್ನು ಕೊಟ್ಟು, ಕೈಗೆ ಚಿನ್ನವನ್ನು ಹಿಡಿಸಿ ನಂತರ ಒಂದು ಚಟಿಕಿ

ಉಪ್ಪನ್ನು ನೀರುಮಾಡಿ ಕುಡಿಸಬೇಕು. ಹೀಗೆ ಮಾಡುವುದರಿಂದ ಮಗುವಿನ ಹೊಟ್ಟೆಯನ್ನು ಸ್ವಚ್ಛ ಮಾಡುತ್ತದೆ.

೨. ಗಣಿಕೆ ಸೊಪ್ಪಿನ ರಸ ತೆಗೆದು ಕಬ್ಬಿಣದಲ್ಲಿ ಬಿಸಿಮಾಡಿ ೨ ದಿವಸ, ೨ ತೊಟ್ಟು ಕುಡಿಸಬೇಕು.

೩. ಸಣ್ಣ ಗುಮ್ಮಟೆ ಸೊಪ್ಪನ್ನು ರಸ ತೆಗೆದು ೨ ದಿವಸ ಬೆಳಗ್ಗೆ ಹೊತ್ತಲ್ಲಿ ಕುಡಿಸಬೇಕು.

೪. ಒಂದೆಲಗದ ಸೊಪ್ಪನ್ನು ರಸ ತೆಗೆದು, ೨ ದಿವಸ ಕುಡಿಸಬೇಕು. ಹೀಗೆ ಮಾಡುವುದರಿಂದ ಮಗುವಿನ ಆರೋಗ್ಯ ಚನ್ನಾಗಿರುತ್ತದೆ.

**ನಂಜರೆ ಕಾಯಿಲೆ ಮಕ್ಕಳಿಗೆ ಬಂದರೆ**

**ಕಾಯಿಲೆಯ ಲಕ್ಷಣ**

ಮಗು ಶಕ್ತಿ ಇಲ್ಲದಂತೆ ಹಾಗೆ ಬೆಳ್ಳಗಾಗುತ್ತದೆ. ರಕ್ತ ಇರುವುದಿಲ್ಲ. ಹೆಚ್ಚಾಗಿ ಬೇದಿಯಾಗುತ್ತದೆ. ಸುಸ್ತಾಗುತ್ತದೆ. ಊಟ ಮಾಡುವುದಿಲ್ಲ. ಹೆಚ್ಚಾಗಿ ನೀರನ್ನು ಕುಡಿಯುತ್ತಾರೆ. ಮಕ್ಕಳ ಬೆಳವಣಿಗೆ ಸರಿಯಾಗಿ ಆಗುವುದಿಲ್ಲ.

**ಔಷಧಿ ತಯಾರಿಸುವ ವಿಧಾನ**

ಲೇಪಾಳ, ದೂಪ್ರಸ, ಶುಂಠಿ, ಕಾಟರೋಣಿ, ರಸೀಂದ್ರ (ಬೀಧಿಮೂತ್ರ ಬೀಜವನ್ನು) ಚೆನ್ನಾಗಿ ತೊಳೆದು ಕುಟ್ಟಿ, ಗುಳಿಗೆ ಮಾಡಿ ಮಕ್ಕಳಿಗೆ ದಿನದಲ್ಲಿ ೪ ಬಾರಿ ಕೊಡುವುದರಿಂದ ನಂಜರೆ ಕಾಯಿಲೆ ಕಡಿಮೆಯಾಗುತ್ತದೆ.

**ಮರಕಟ್ಟು ಕಾಯಿಲೆ ಲಕ್ಷಣ**

ಕೈಕಾಲು ಆಡಿಸುವುದಿಲ್ಲ, ಹಾಲು ಕುಡಿಯುವುದಿಲ್ಲ, ನಿದ್ದೆ ಮಾಡುವುದಿಲ್ಲ.

**ಔಷಧಿ ತಯಾರಿಸುವ ವಿಧಾನ**

ಕಾಟರೋಣಿ, ಇಂಗ್ಟೆ, ಶುಂಠಿ ದೂಪ್ರಸ್ಥವನ್ನು ಮಿಶ್ರಣಮಾಡಿ ನುಣ್ಣಗೆ ಕುಟ್ಟುವುದು ನಂತರ ಗುಳಿಗೆ ಮಾಡಿ ವಾರಕ್ಕೆ (೭ ದಿನಕ್ಕೆ) ಒಂದು ಬಾರಿಯಂತೆ ಒಂದು ತಿಂಗಳು ತೆಗೆದುಕೊಳ್ಳಬೇಕು.

**ಹೊಟ್ಟೆನೋವು**

ಮೊಸರು ಮತ್ತು ಅನ್ನವನ್ನು ಸೇರಿಸಿ ತಿನ್ನಿಸಬೇಕು. ನಂತರ ಎಳೆನೀರು (ತೆಂಗಿನ ಕಾಯಿ) ನೀರನ್ನು ಕುಡಿಸುವುದರಿಂದ ಹೊಟ್ಟೆನೋವು ಕಡಿಮೆಯಾಗುತ್ತದೆ.

**ಮಕ್ಕಳಿಗೆ ಕೆಮ್ಮು ಬಂದಾಗ**

ನಾಯಿ ತುಳಸೀಸೊಪ್ಪು, ಒಳ್ಳೆ ತುಳಸಿ, ತುಂಬೆ ಹೂ, ಎಲಿತೊಟ್ಟು ಇದನ್ನು ಎಲೆಯಲ್ಲಿ ಮಡಚಿ, ಕೆಂಡದ ಮೇಲೆ ಬಿಸಿಮಾಡಿ ಸ್ವಲ್ಪ ಸಮಯದ ನಂತರ ಅದನ್ನು ಚೆನ್ನಾಗಿ ಕುಟ್ಟಿರಸವನ್ನು ಹಿಂಡಿ ತಾಯಿ ಎದೆಯ ಹಾಲಲ್ಲಿ ಹಾಕಬೇಕು. ಹೀಗೆ ದಿನಕ್ಕೆ ೧ ಬಾರಿಯಂತೆ ೩ ದಿನ ಹಾಕಬೇಕು ಕೆಮ್ಮು ವಾಸಿಯಾಗುತ್ತದೆ.

**ಮಗುವಿಗೆ ಮೂಳೆ ಹುಳುಕಿದರೆ**

ತಿಪ್ಪೆಯಲ್ಲಿನ ಗೊಬ್ಬರ, ಹುರುಳಿಕಾಳನ್ನು ಮಿಶ್ರಣಮಾಡಿ ಹಸುವಿನ ಗೆಜ್ಜಲನ್ನು ಕಲಿಸಿ ಕಟ್ಟುವುದರಿಂದ ಹುಳಿಕಿದ ಮೂಳೆಯ ನೋವು ನಿವಾರಣೆಯಾಗುತ್ತದೆ.

**ಕೇರಿನಿಂದಾದ ಗಾಯ**

ಎಳ್ಳನ್ನು ಹಾಲಿನೊಡನೆ ಅರೆದು ಹಚ್ಚುವುದರಿಂದ ಕೇರಿನಿಂದಾದ ಗಾಯ, ಊತ, ಕಡಿಮೆಯಾಗುತ್ತದೆ.

**ತುಟಿ ಒಡೆದರೆ**

ಸಾಸಿವೆ ಎಣ್ಣೆಯನ್ನು ಹೊಕ್ಕಳಿಗೆ ೩ ಸಲ ಒಂದು ತಿಂಗಳು ಹಚ್ಚುವುದರಿಂದ ಈ ಕಾಯಿಲೆ ವಾಸಿಯಾಗುತ್ತದೆ.

**ಮೂತ್ರ ಉರಿಯುತ್ತಿದ್ದರೆ**

ಹೊಕ್ಕಳಿಗೆ ಸುಣ್ಣವನ್ನು ಹಚ್ಚಿದರೆ ಮೂತ್ರ ಉರಿಯುವುದು ಕಡಿಮೆಯಾಗುತ್ತದೆ.

**ಕುರುವು**

ಕರಿಬೇವಿನ ಎಲೆ, ಅರಿಶಿನವನ್ನು ಮಿಶ್ರಮಾಡಿ ಕುರುವಿಗೆ ಹಚ್ಚಿದರೆ ಅದು ಒಡೆದು ಕೀವು ಸೋರಿ ಗಾಯವಾಸಿಯಾಗುತ್ತದೆ.

**ಮೂಗು ಬಿಚ್ಚಿದರೆ**

ಕರ್ಪೂರವನ್ನು ಪುಡಿಮಾಡಿ ನೀರಲ್ಲಿ ಕರಗಿಸಿ ಮೂಗಿನ ಹೊಳಗೆ ೩-೪ ಹನಿ ಹಾಕಿಕೊಂಡರೆ ಮೂಗನಿಂದ ರಕ್ತ ಸೋರುವುದು ಕಡಿಮೆಯಾಗುತ್ತದೆ.

**ಅಜೀರ್ಣವಾದರೆ**

ಹುರಿದ ಕೊತ್ತಂಬ್ರಿ ಬೀಜವನ್ನು ನೀರಿನಲ್ಲಿ ಕುದಿಸಿ, ಅದಕ್ಕೆ ಹಾಲು ಮತ್ತು ಸಕ್ಕರಿಯನ್ನು ಕಲಸಿ ಕುಡಿದರೆ ಅಜೀರ್ಣತೆ ವಾಸಿಯಾಗುತ್ತದೆ.

**ನಾಲಿಗೆಯ ಮೇಲೆ ಗುಳ್ಳಿ ಆದರೆ**

ಒಣ (ಗಿಟಗ) ಕೊಬರಿಯನ್ನು ಬೆಳಿಗ್ಗೆ-ರಾತ್ರಿ ತಿನ್ನುವುದರಿಂದ ನಾಲಿಗೆಯ ಮೇಲಿನ ಗುಳ್ಳಿಗಳು ಸಾಪಾಗುತ್ತವೆ.

**ಪತ್ಯ**

೩-೪ ದಿನ ಚಹಾ ಕುಡಿಯಬಾರದು, ಖಾರದ ಊಟ ಮಾಡಬಾರದು.

**ಮಗುವಿಗೆ ಜಂತು ಬಿದ್ದರೆ**

ಹರಳೆಣ್ಣೆಯಲ್ಲಿ ಹರಳೆಕಾಯಿಯನ್ನು ಅರೆದು ಉಂಡೆಮಾಡಿ ಅದನ್ನು ಮಗುವಿನ ಹೊಟ್ಟೆಗೆ ತಿನ್ನಿಸಿದರೆ ಬೇದಿಯ ಮೂಲಕ ಜಂತು ಬಿದ್ದು ಮಗುವು ಆರೋಗ್ಯದಿಂದ (ದಪ್ಪನಾಗಿ) ಚೆನ್ನಾಗಿರುತ್ತದೆ.

**ಅಮ್ಮ ಎದ್ದಾಗ**

ಬಿಸಿನೀರಿನಲ್ಲಿ ಹರಳೇಣ್ಣೆಯನ್ನು ಹಾಕಿ ಸ್ನಾನ ಮಾಡಿಸಬೇಕು.

**ಪತ್ಯ**

ಈ ಕಾಯಿಲೆ ಬಂದಾಗ ಖಾರದ ಪದಾರ್ಥವನ್ನು ತಿನ್ನಿಸಬಾರದು. ಮಜ್ಜಿಗೆ, ಸಪ್ಪೆಯ ಅನ್ನ ತಿನ್ನಿಸಬಹುದು.

**ಮಕ್ಕಳಿಗೆ ಬರುವ ಜ್ವರ**

೧. ಕಣ್ಣು ಉರಿ, ಆಯಾಸದಿಂದ ಬಳಲುವಂತಹ ಮಕ್ಕಳಿಗೆ ಸೊಗಡೆ ಬೇರಿನ ಕಷಾಯ ಸಕ್ಕರೆಯೊಂದಿಗೆ ಮೂರರಿಂದ ನಾಲ್ಕು ಚಮಚ ಮುಂಜಾನೆ ಮತ್ತು ಸಂಜೆ ಕುಡಿಸುವುದರಿಂದ ಜ್ವರ ಕಡಿಮೆಯಾಗುತ್ತದೆ.

೨. ಮಕ್ಕಳಲ್ಲಿ ನಿರಂತರ ಬರುವ ಜ್ವರಕ್ಕೆ ಒಂದೆಲುಗ ಬೇವಿನ ಸೊಪ್ಪನ್ನು ಕುಟ್ಟಿರಸ ತೆಗೆದು ೨-೩ ಮೆಣಸನ್ನು ಸೇರಿಸಿ ಸ್ವಲ್ಪ ಬಿಸಿ ಮಾಡಿ ಮೂರುಹೊತ್ತು ಒಂದೊಂದು ಚಮಚದಂತೆ ಕುಡಿಸುವುದರಿಂದ ನಿರಂತರ ಬರುವ ಜ್ವರ ಕಡಿಮೆಯಾಗುತ್ತದೆ.

**ಮಕ್ಕಳ ಹೊಟ್ಟೆ ಬ್ಯಾನಿ ಆದರೆ**

ಉತ್ರಾಣಿ ಗಿಡದ ಬೇರಿನಿಂದ ಗಂಧ ತೇಯ್ದು ಕೂಸಿನ ನಾಲಿಗೆಗೆ ನೆಕ್ಕಿಸುವುದರಿಂದ ಹೊಟ್ಟೆ ಬ್ಯಾನಿ ಕಡಿಮೆಯಾಗುತ್ತದೆ.

**ಮಕ್ಕಳಿಗೆ ನೆಗಡಿ, ಕೆಮ್ಮು ಆದರೆ**

ಕೊರಳಲ್ಲಿ (ಎದಿಗೆ), ಬರೆಪಲೆ, ಬೊಳ್ಳೊಳ್ಳಿ ಸರ ಮಾಡಿ ಕಟ್ಟಬೇಕು.

**ಮಕ್ಕಳ ಕಣ್ಣಲ್ಲಿ ನೀರು ಸೋರುತ್ತಿದ್ದರೆ**

ಫಡಪತ್ರಿ ಗಿಡದ ಹಾಲು ಕಣ್ಣು ಹುಬ್ಬಿಗೆ ಹಚ್ಚುವುದರಿಂದ ಕಣ್ಣಲ್ಲಿ ನೀರು ಸೋರುವುದು ಕಡಿಮೆ ಆಗುತ್ತದೆ.

**ಮಾನಸಿಕ ಚೈತನ್ಯಕ್ಕೆ (ದೈಹಿಕ)**

ಬದಾಮಿ ಬೀಜ ರಾತ್ರಿಯಲ್ಲಿ ಬಿಸಿ ನೀರಿನ್ಯಾಗ ನೆನಸಿ ಮರುದಿನ ಮುಂಜಾನೆ ಸಿಪ್ಪಿ ತೆಗಿದು ನುಣ್ಣಗ ಅರೆದು ಒಂದು ಚಮಚದಷ್ಟು ದಿನಾ ಕುಡಿಸಿದರೆ ಮನಸ್ಸು, ಬುದ್ಧಿ, ಚುರುಕಾಗಿರುತ್ತದೆ.

**ಅನ್ನ ಪಚನ ಆಗದಿದ್ದರೆ**

ಒಂದು ಬಟ್ಲದೋಟು ಟೋಮಟೋ ಹಣ್ಣಿನ ರಸವನ್ನು ಗಂಟೆಗೊಮ್ಮೆ ಹನಿ ಹನಿ ಹಾಕಿ ಕುಡಿಸಿದರೆ ಅನ್ನ ಪಚನವಾಗುತ್ತದೆ.

**ಕೆಮ್ಮು**

ತಳಸಿ ರಸ, ಜೇನು ತುಪ್ಪವನ್ನು ಕಲಸಿ ದಿನ ಬೆಳಗ್ಗೆ ರಾತ್ರಿಯಂತೆ ಒಂದು ಚಮಚ ಮೂರು ದಿನಗಳು ಕುಡಿಯಬೇಕು.

**ಹುಟ್ಟಿದ ಮಗುವಿಗೆ ಕೆಮ್ಮು ಆದರೆ**

ಲವಂಗ, ಬೊಳ್ಳೊಳ್ಳಿ, ಕಾಳು ಮೆಣಸನ್ನು ಕುಟ್ಟಿ, ತಾಯಿಯ ಎದೆ ಹಾಲಿನಲ್ಲಿ ಕಲಸಿ ಕುಡಿಸುವುದರಿಂದ ಕೆಮ್ಮು ಕಡಿಮೆಯಾಗುತ್ತದೆ. ಕಸ್ತೂರಿ ಮಾತ್ರೆಯನ್ನು ಎದೆ ಹಾಲಿನಲ್ಲಿ ತೇಯ್ದು ಅದನ್ನು ದಿನಕ್ಕೆ ೩ ಬಾರಿಯಂತೆ ಸ್ವಲ್ಪ ಸ್ವಲ್ಪ ಹಾಕಬೇಕು. ಇದರಿಂದ ೩-೪ದಿನಕ್ಕೆ ಕೆಮ್ಮು ನಿವಾರಣೆ ಆಗುತ್ತದೆ.

**ಬಾಲಗ್ರಹ ಆದರೆ**

ತಗಡಿನಲ್ಲಿ ಮಂತ್ರಗಳನ್ನು ಹಾಕಿ, ಚೀಟಿಯನ್ನು ಕತ್ತಿಗೆ ಕಟ್ಟುವುದರಿಂದ ೨-೩ ದಿನಕ್ಕೆ ಬಾಲಗ್ರಹ ನಿವಾರಣೆ ಆಗುತ್ತದೆ.

**ಮಕ್ಕಳಿಗೆ ಗಾಯವಾದರೆ**

ಭೀಮನ ಕಡ್ಡಿಯ ಸೊಪ್ಪನ್ನು ಚೆನ್ನಾಗಿ ಜಜ್ಜಿ ಅದರ ರಸವನ್ನು ದತ್ತೂರಿ ಹಾಲಿನಲ್ಲಿ ಬೆರೆಸಿ ಗಾಯಕ್ಕೆ ಹಚ್ಚುವುದರಿಂದ ಗಾಯ ವಾಸಿಯಾಗುತ್ತದೆ.

**ಕೆಮ್ಮು ಬಂದಾಗ**

ತುಪ್ಪಿರೇ ಸೊಪ್ಪಿನ ರಸ ತೆಗೆದು ಬಿಸಿಮಾಡಿ ತಾಯಿಯ ಎದೆಹಾಲಿನಲ್ಲಿ ಕುಡಿಸಬೇಕು. ಕೆಮ್ಮು ಕಡಿಮೆಯಾಗುತ್ತದೆ.

**ರಕ್ತಬೇದಿ ಮತ್ತು ನಿಶ್ಯಕ್ತಿ**

ಹಸಿ ರಾಗಿಯನ್ನು ರುಬ್ಬಿಸಿ ಅದರ ರಸವನ್ನು ಹಿಂಡಿ ತೆಗೆದು ಕುಡಿಯುವುದರಿಂದ ರಕ್ತಬೇದಿ, ನಿಶ್ಯಕ್ತಿ ವಾಸಿಯಾಗುತ್ತದೆ.

**ಮಕ್ಕಳ ಅಳ್ಳೆತ್ತಿ ಉರಿಯುವುದು**

ಮಕ್ಕಳ ಅಳ್ಳೆತ್ತಿ ಉರಿದರೆ ಒಳ್ಳೆಣ್ಣೆಯನ್ನು ಚೆನ್ನಾಗಿ ಹಚ್ಚಿ ತಿಕ್ಕಿಸಿದರೆ ಅಳ್ಳೆತ್ತಿ ಉರಿ ಕಡಿಮೆಯಾಗುತ್ತದೆ. ಔಡಲೆಣ್ಣೆಯನ್ನು ಅರಳೆಯಲ್ಲಿ ಅದ್ದಿ ಅಳ್ಳೆತ್ತಿಗೆ ಇಟ್ಟರೆ ಅಳ್ಳೆತ್ತಿ ಉರಿಯುವುದು ಕಡಿಮೆಯಾಗುತ್ತದೆ.

ಅಳ್ಳೆತ್ತಿ ಉರಿದರೆ ಒಳ್ಳೆಣ್ಣೆಯನ್ನು ತಲೆಗೆ ಹಚ್ಚಿ ಚೆನ್ನಾಗಿ ತಿಕ್ಕಿಸಿದರೆ ಉರಿ ಕಡಿಮೆಯಾಗುತ್ತದೆ.

**ಮಕ್ಕಳಿಗೆ ದೃಷ್ಟಿ ದೋಷ ಆದರೆ**

೧. ದೃಷ್ಟಿ ದೋಷದಿಂದ ಅಳುವ ಮಗುವಿಗೆ ಕ್ಯಾರು ಮೂರು ಸಾರಿ ಇಳಿಸಿ ನಂತರ ಆ ಕ್ಯಾರನ್ನು ಡಬ್ಬಣ, ಇಲ್ಲವೆ ಮೊಳಗೆ ಚುಚ್ಚಿ ದೀಪಕ್ಕೆ ಹಿಡಿದರೆ ದೀಪದಿಂದ ಕ್ಯಾರು ಸುಟ್ಟು ಚಟ್‌ಪಟ್ ಅಂಥ ಶಬ್ದ ಬಂದರೆ ದೃಷ್ಟಿ ದೋಷ ಹೋಗುವುದು.

೨. ಒಣಮೆಣಸಿನಕಾಯಿ ಮತ್ತು ಉಪ್ಪನ್ನು ಒಂದು ಹಿಡಿಯಲ್ಲಿ ತಂದು ಮಗುವಿಗೆ ಮತ್ತು ಸೂರ್ಯನಿಗೆ ಎಡಗೈಯಿಂದ ಮೂರು ಸಾರಿ ಇಳಿಸಿ ಉರಿಯುವ ಒಲೆಯಲ್ಲಿ ಹಾಕಬೇಕು. ಒಲೆಯಲ್ಲಿ ಹಾಕಿದಾಗ ಚಟ್‌ಪಟ್ ಅಂಥ ಶಬ್ದ ಬಂದರೆ ದೃಷ್ಟಿ ದೋಷ ಹೋಗುವುದು.

೩. ಮಗುವಿಗೆ ದೃಷ್ಟಿದೋಷ ಬರದಂತೆ ಮಾಡಲು ಮಕ್ಕಳ ಕೊರಳಲ್ಲಿ ಅಥವಾ ಕೈಯಲ್ಲಿ ಕರಿದಾರ ಕಟ್ಟಬೇಕು ಇಲ್ಲವೇ ಉಣ್ಣೆಯ ದಾರವನ್ನು ಕಟ್ಟಬೇಕು.

೪. ಮಗುವಿಗೆ ದೃಷ್ಟಿದೋಷ ಆದರೆ ಕರಡಿಯ ಕೂದಲನ್ನು ಕಿತ್ತಿ ಒಂದು ಅರಿವಿಯಲ್ಲಿ ಕಟ್ಟಿ ಮಗುವಿನ ಕೊರಳಿನಲ್ಲಿ ಕಟ್ಟಬೇಕು.

೫. ಮಗು ದೃಷ್ಟಿದೋಷದಿಂದ ಅಳುತ್ತಿದ್ದರೆ ಮಗುವಿನ ಮುಖಕ್ಕೆ ಮತ್ತು ಗಲ್ಲಕ್ಕೆ ಹಂಚಿನ ಮಸಿಯನ್ನು ಇಲ್ಲವೆ ಕಾಡಗಿಯನ್ನು ಹಚ್ಚಬೇಕು.

**ಮಕ್ಕಳಿಗೆ ಮುಟ್ಟುದೋಷ ಆದರೆ**

ಮುಟ್ಟಾದವರು ಮಗುವನ್ನು ಎತ್ತಿಕೊಂಡರೆ ಇಲ್ಲವೆ ಆಡಿಸಿದರೆ ಮುಟ್ಟಾದವರ ನೆರಳು ಬಿದ್ದರೆ ಮಗು ಸೊರಗುವುದು. ಇದಕ್ಕೆ ಮುಟ್ಟುದೋಷವೆಂದೂ ಕರೆಯುತ್ತಾರೆ. ಮುಟ್ಟುದೋಷಕ್ಕೆ ಒಳಗಾದ ಮಗುವನ್ನು ರವಿವಾರ ಅಥವಾ ಗುರುವಾರ ದಿನ ಮುಂಜಾನೆ ನಸುಗು ಇರುವುದರೊಳಗಾಗಿ ಹೋಗಿ ಮೂರು ದಾರಿ ಕೂಡುವ ಸ್ಥಳದಲ್ಲಿ ಲಿಂಬೆಹಣ್ಣನ್ನು, ಮಗುವಿನ ಬಟ್ಟೆಯನ್ನು ನಡುದಾರಿಯಲ್ಲಿ ಇಟ್ಟು ಬರಬೇಕು. ಬರುವಾಗ ಹಿಂದಕ್ಕೆ ತಿರುಗಿ ನೋಡಬಾರದು. ಆಗ ಮಕ್ಕಳ ಮುಟ್ಟು ದೋಷವು ವಾಸಿಯಾಗುತ್ತದೆ.

**ಮಕ್ಕಳ ಹೊಟ್ಟೆ ನೋವಿಗೆ**

೧. ವಿಷದ ಹೀರೇಕಾಯಿ ತಪ್ಪಲನ್ನು ಕುಟ್ಟಿ ಅದರ ರಸವನ್ನು ಕಪ್ಪೆಚಿಪ್ಪಿನಲ್ಲಿ ಹಾಕಿ ಮಗುವಿಗೆ ಕುಡಿಸಬೇಕು. ದಿನಕ್ಕೆ ೨-೩ ಸಲ ಹೀಗೆ ಕುಡಿಸುವುದರಿಂದ ಮಗುವಿನ ಹೊಟ್ಟೆನೋವು ಕಡಿಮೆಯಾಗುತ್ತದೆ.

೨. ಅಜಿವಾನದ ಎಲೆಯನ್ನು ಕುಟ್ಟಿ ರಸವನ್ನು ತೆಗೆದು, ಮೊಲೆಹಾಲಿನಲ್ಲಿ ಕಲಸಿ ಕುಡಿಸಿದರೆ ಮಗುವಿನ ಹೊಟ್ಟೆನೋವು ಕಡಿಮೆಯಾಗುತ್ತದೆ.

**ಜಂತುಹುಳುವಿನಿಂದ ಹೊಟ್ಟೆ ಕಡಿಯುವುದು**

೧. ಪಪ್ಪಾಯಿ ಹಣ್ಣಿನ ಬೀಜವನ್ನು ಮಗುವಿಗೆ ನುಂಗಿಸಿದರೆ ಜಂತುಹುಳು ಬೀಳುತ್ತವೆ.

೨. ತುಪ್ಪದಲ್ಲಿ ಜಾಜಿಕಾಯಿ ರಸವನ್ನು ಕಲಿಸಿ ನೆಕ್ಕಿಸಿದರೆ ಜಂತುಹುಳು ಹೋಗುವುದು.

**ಕಿವಿ ಸೋರುವುದಕ್ಕೆ**

ಕಿವಿಗೆ ಪೆಟ್ಟು ಬಿದ್ದು ಇಲ್ಲವೆ ಕಡ್ಡಿ ಚುಚ್ಚಿ ಕಿವಿಯ ಪರದೆ ಹರಿದು ಕಿವಿ ಸೋರುತ್ತಿದ್ದರೆ, ಕಿವಿಯಲ್ಲಿ ಗುಳ್ಳೆಯಾಗಿ ಕಿವಿ ನೋವಾದರೆ ಬೊಳ್ಳೊಳ್ಳಿ ಲವಂಗವನ್ನು ಕೊಬ್ಬರಿ ಎಣ್ಣೆಯಲ್ಲಿ ಸಮವಾಗಿ ಹಾಕಿ ಕರಿಯಬೇಕು. ನಂತರ ಅವೆರಡನ್ನು ಒಂದು ಅರಿವೆಯಲ್ಲಿ ಕಟ್ಟಿ ರಸವನ್ನು ಕಿವಿಗೆ ಹಿಂಡಿದರೆ ಕಿವಿನೋವು ವಾಸಿಯಾಗುತ್ತದೆ. ಹೀಗೆ ರಾತ್ರಿ ಮಲಗುವ ಮುಂಚೆ ಹಾಕಿಕೊಂಡು ಮಲಗಬೇಕು.

**ಹಾಲು ಕಕ್ಕಿದರೆ**

೧. ಮಗುವು ಕುಡಿದ ಹಾಲನ್ನು ಕಕ್ಕಿ ಹೊರಗೆ ಹಾಕುತ್ತಿದ್ದರೆ ಒಂದು ಚಮಚದಲ್ಲಿ ಎದೆಹಾಲನ್ನು

ಹಿಂಡಿ, ಚಮಚಕ್ಕೆ ದಾರಕಟ್ಟಿ ಒಲೆಯ ಉರಿಯಲ್ಲಿ ಹಿಡಿದು ಕಾಸಬೇಕು. ದಾರ ಸುಟ್ಟು ಕರಕಾಗುವುದು ಆ ಕರಕನ್ನು ಕಾಸಿದ ಹಾಲಿನಲ್ಲಿ ಕಲಸಿ ಮಗುವಿಗೆ ಕುಡಿಸಿದರೆ ಹಾಲು ಕಕ್ಕುವುದು ನಿಲ್ಲುವುದು.

೨. ಬೆರಳಿಗೆ ಜೇನು ತುಪ್ಪ ಹಚ್ಚಿಕೊಂಡು ಮಗುವಿಗೆ ನೆಕ್ಕಿಸುತ್ತಾ ಇದ್ದರೆ ಮಗು ಹಾಲು ಕಕ್ಕುವುದನ್ನು ನಿಲ್ಲಿಸುವುದು.

೩. ಆಲಿಕುಡಿಯನ್ನು ಸಣ್ಣಾಗಿ ಅರೆದು ಮೊಲೆ ಹಾಲಲ್ಲಿ ಕಲಸಿ ಕುಡಿಸಿದರೆ ಹಾಲು ಕಕ್ಕುವುದು ನಿಲ್ಲುವುದು.

**ಅಳ್ಳೆತ್ತಿ ಬಿದ್ದರೆ**

ಔಡಲ ಎಣ್ಣ್ಯಾಗ ಸುಣ್ಣ, ಬೆಲ್ಲವನ್ನು ಹಾಲಿನ ಕೆನಿಯಲ್ಲಿ ಕಲಸಿ ಇಳೆದೆಲಿಹಾಕಿ ಅಳ್ಳೆತ್ತಿಗೆ ಕಟ್ಟಬೇಕು. ಹೀಗೆ ಒಂದು ದಿನ ಬಿಟ್ಟು ಇನ್ನೊಂದುದಿನ ಮೂರು ಸಲ ಹೀಗೆ ಕಟ್ಟಬೇಕು. ಉದ್ದಿನ ಬೇಳೆ, ಅಜ್ಜಿವಾನ, ಬೆಲ್ಲ ಇಷ್ಟನ್ನು ಕಲಸಿ ಕುಟ್ಟಿ ಪುಡಿಮಾಡಿ ಔಡಲ ಎಣ್ಣೆಯಲ್ಲಿ ಕಲಸಿ, ಅಳ್ಳೆತ್ತಿಗೆ ಹಚ್ಚಬೇಕು.

**ಕೆಮ್ಮು ಸಹಿತ ಉರಿ ಬಂದ್ರೆ**

ಕರಿ ಮೆಣಸಿನ ಪುಡಿ, ತುಳಸಿ ರಸದಾಗ ಕಲಸಿ ಕುಡಿಸಬೇಕು, ಕೆಮ್ಮು ಸಹಿತ ಉರಿಬರೋದು ಕಡಿಮೆಯಾಗುತ್ತದೆ. ಹೀಗೆ ೩ ದಿನ ಬೆಳಗ್ಗೆ ಮಾತ್ರ ಕೊಡಬೇಕು.

**ಕಿವುಡತನ ಇದ್ದರೆ**

ನಾಲ್ಕೈದು ಉಳ್ಳಾಗಡ್ಡಿಯನ್ನು, ೨೫೦ಗ್ರಾಂ ಬಾದಾಮಿ ಎಣ್ಣೆಯಲ್ಲಿ ಹಾಕಿ ಕಾಯಿಸಬೇಕು. ಉಳ್ಳಾಗಡ್ಡಿ ಎಣ್ಣೆಯಲ್ಲಿ ಸುಟ್ಟು ಕೆಂಪಾದ ಮೇಲೆ, ಆ ಎಣ್ಣೆಯನ್ನು ಆರಿಸಿ, ಬಟ್ಟ್ಯಾಗ ಸೋಸಿ ಒಂದು ಬಾಟ್ಲಿಯಲ್ಲಿ ತೆಗೆದಿಟ್ಟುಕೊಂಡು ದಿನಕ್ಕೆ ೩-೪ ಹನಿ ಕಿವಿಯಾಗ ಆಕ್ಕಿಕೊಳ್ಳಬೇಕು. ಹೀಗೆ ಒಂದು ವರ್ಷಪೂರ್ತಿ ಆಕಿಕೊಳ್ಳಬೇಕು. ಆಗ ಕಿವುಡುತನ ವಾಸಿಯಾಗುತ್ತದೆ.

**ಕಿವಿ ಸೋರಿದರೆ**

ಮುಟ್ಟಿದರೆ ಮುನಿ ಗಿಡದ ತಪ್ಪಲ ಮತ್ತು ಬೇರನ್ನು ತಂದು ಚೆನ್ನಾಗಿ ಅರೆದು ಅದರ ರಸವನ್ನು ಕಿವಿಗೆ ದಿನಕ್ಕೆ ೨ ಹನಿಯನ್ನು ೩ ದಿನ ಹಾಕಿಕೊಳ್ಳಬೇಕು.

**ಕಿವಿ ಒಳಗ ಹುಣ್ಣಾದರೆ**

ತುಳಸಿ ರಸವನ್ನು ಹನಿ ಹನಿಯಾಗಿ ದಿನಕ್ಕೆ ೩ ಸಾರಿಯಂತೆ ೨-೩ದಿನ ಹಾಕಿಕೊಳ್ಳಬೇಕು.

**ಉಗುರು ಸುತ್ತಾದ್ರೆ**

೧. ಹುಂಚಿ ಗಿಡದ ತೊಗಟೆ, ಉಳ್ಳಾಗಡ್ಡಿ, ಸಾಸಿವೆ, ಇವಿಷ್ಟನ್ನು ಕಲಸಿ ಚೆನ್ನಾಗಿ ಕುಟ್ಟಿ ಉಗುರು ಸುತ್ತಾದ ಬೆರಳಿಗೆ ಹಚ್ಚಬೇಕು.

೨. ತೊಟ್ಟಿಲ ಕಾಯಿ, ದಾಳಿಂಬೆ, ಅರಿಸಿನವನ್ನು ಸೇರಿಸಿ ಚೆನ್ನಾಗಿ ಕುಟ್ಟಿ ಪುಡಿಮಾಡಿ ಔಡಲ ಎಣ್ಣೆಯಲ್ಲಿ ಕಲಸಿ, ಉಗುರು ಸುತ್ತಾದ ಜಾಗಕ್ಕೆ ಮೂರು ದಿನಕ್ಕೆ ಒಂದು ಬಾರಿ ಹಚ್ಚಬೇಕು. ಹೀಗೆ ಎರಡು ದಿನ ಕಟ್ಟಬೇಕು. ಉಗುರು ಸುತ್ತು ಒಡಿದು ಕೀವು ಸೋರಿ ಕಡಿಮೆಯಾಗುತ್ತದೆ.

**ಮಗುವಿಗೆ ಭೇದಿಯಾದರೆ**

೧. ಅಂಟು, ತೆಗರಿಯ ಹೂವನ್ನು ಬಿಸಿ ನೀರಿನಲ್ಲಿ ಹಾಕಿ ಕುದಿಸಿ ಅದರ ನೀರನ್ನು ಕುಡಿಯುವು ದರಿಂದ ಭೇದಿ ಕಡಿಮೆಯಾಗುತ್ತದೆ.

೨. ನೀರು ಮಜ್ಜಿಗೆಯನ್ನು ಕುಡಿಯುವದರಿಂದ ಭೇದಿ ಕಡಿಮೆಯಾಗುತ್ತದೆ.

೩. ಎಳೆ ನೀರನ್ನು ಕುಡಿಯುವುದರಿಂದ ಭೇದಿ ಕಡಿಮೆಯಾಗುತ್ತದೆ.

೪. ನೇರಳೆ ಹಣ್ಣಿನ ಷರಬತ್ತನ್ನು ಕುಡಿದರೆ ಭೇದಿ ನಿಲ್ಲುತ್ತದೆ.

**ಕಜ್ಜಿ ಆದರೆ**

ಬೇವಿನ ತಪ್ಪಲು ಎಳೆಯ ಚಿಗರನ್ನು ಅರಿಷಿನದಲ್ಲಿ ಅರೆದು ಕಜ್ಜಿ ಆದ ಸ್ಥಳಕ್ಕೆ ಹಚ್ಚಬೇಕು. ಚರ್ಮದ ಮೇಲೆ ಯಾವುದೇ ರೀತಿಯ ಗುಳ್ಳೆ, ತದ್ದು ಆದರೂ ಕೂಡ ಬೇವಿನ ತಪ್ಪಲನ್ನು ಹಚ್ಚುವುದರಿಂದ ಕಜ್ಜಿ, ಚರ್ಮದ ಮೇಲಿನ ಗುಳ್ಳೆ, ತದ್ದು ವಾಸಿಯಾಗುತ್ತವೆ.

**ಚಿಕ್ಕಮಕ್ಕಳಿಗೆ ಫಿಡ್ಸ್ ಇದ್ದರೆ**

ಚಿಕ್ಕಮಕ್ಕಳಿಗೆ ಫಿಡ್ಸ್ ಆದರೆ ಬಜೆಯನ್ನು ದಿನಕ್ಕೆ ೩ ಬಾರಿಯಂತೆ ಆರು ತಿಂಗಳುವರೆಗೆ ತಿನ್ನಿಸಬೇಕು.

**ಜ್ಞಾನಪಕ ಶಕ್ತಿಗೆ**

ಬಾದಾಮಿಯನ್ನು ನೀರಿನಲ್ಲಿ ರಾತ್ರಿಯಿಡಿ ನೆನೆಸಿ, ಬೆಳಗ್ಗೆ ಸಿಪ್ಪೆಯನ್ನು ತೆಗೆದು ತಿನ್ನಿಸಬೇಕು.

**ಕಣ್ಣಿನ ದೃಷ್ಟಿ ಮಂದಾದಾಗ**

ಬೇವಿನ ಗಿಡದ ಅಂಟನ್ನು ಕುಟ್ಟಿ, ಜೇನುತುಪ್ಪದಾಗ ಕಲಸಿ ಕಣ್ಣಿನ ಕೆಳಗಿನ ಪರಿಗೆ ಹಚ್ಚಬೇಕು.

**ಕಿಸುರೋಡೆದ್ರೆ ಮಕ್ಕಳಿಗೆ**

ಗೊಲ್ಲ ಜಡಿ ತಪ್ಪಲದ ರಸವನ್ನು ತೆಗೆದು ಮಕ್ಕಳ ಅಂಗಾಲಿಗೆ ಚೆನ್ನಾಗಿ ಹಚ್ಚಬೇಕು. ಹೀಗೆ ೩-೪ ದಿನ ಹಚ್ಚಬೇಕು. ಆಗ ಕಿಸುರೊಡೆಯುವುದು ಕಡಿಮೆಯಾಗುತ್ತದೆ.

**ಉಬ್ಬಸಕ್ಕೆ**

ಕಾಡು ಮಲ್ಲಿಗೆ ಒಂದು ಹಿಡಿ ಉಪ್ಪು ಸೇರಿಸಿ ಕುಡಿಯುವುದರಿಂದ ವಾಂತಿ ಆಗುತ್ತೆ, ಕಫ ಹೊರಗೆ ಹೋಗುತ್ತೆ ನಂತರ ಕಾಫಿ ಕುಡಿಯುವುದರಿಂದ ಉಬ್ಬಸ ವಾಸಿಯಾಗುತ್ತದೆ.

**ಮೈಶಕ್ತಿ ಹೆಚ್ಚಾಗಬೇಕಾದರೆ**

ಗಸಗಸೆ, ಉತ್ತುತ್ತಿ, ಬಾದಾಮಿ, ದ್ರಾಕ್ಷಿಯನ್ನು ಸೇರಿಸಿ ಪುಡಿಮಾಡಿ ತುಪ್ಪದಲ್ಲಿ ಕಲಿಸಿ ಕಲ್‌ಸಕ್ಕರೆ ಜೊತೆ ತಿನ್ನುವುದರಿಂದ ಮೈಶಕ್ತಿ ಹೆಚ್ಚಾಗುತ್ತದೆ.

**ತಂಡಿ ಶೀತಕ್ಕೆ**

ಸೋಪು, ಸಾಸಿವೆ, ಬಜೆ, ಹಿಪ್ಲಿಕಾಯಿ, ವಾಮ ಇವಿಷ್ಟನ್ನು ಸೇರಿಸಿ ಚೆನ್ನಾಗಿ ಕುಟ್ಟಿ ೩ ಗ್ಲಾಸ್ ನೀರನ್ನು ಹಾಕಿ ಚೆನ್ನಾಗಿ ಕುದಿಸಿ ೧ ಗ್ಲಾಸ್ ನೀರು ಆಗುವಷ್ಟು ಕುದಿಸಬೇಕು. ಈ ಕಷಾಯವನ್ನು ಪ್ರತಿದಿನ ೧ ಚಮಚ ಹಾಲಿಗೆ ೧ ಚಮಚ ಕಷಾಯಸೇರಿಸಿ ಕುಡಿಯಬೇಕು. (ಬೇದಿ ಸರಿಯಾಗಿ ಆಗದಿದ್ದವರಿಗೂ ಇದನ್ನು ಕುಡಿಸಬೇಕು. ಆಗ ಸರಿಯಾಗುತ್ತದೆ).

**ಮಕ್ಕಳಿಗೆ ಮೂಲವ್ಯಾದಿ**

ದಡ್ಡಲ್ದಕೆತ್ತೆಯ ರಸಕ್ಕೆ ಹಾಲು ಸೇರಿಸಿ ಕುಡಿದರೆ ಮೂಲವ್ಯಾದಿ ಕಡಿಮೆಯಾಗುತ್ತದೆ.

**ಮಕ್ಕಳಿಗೆ ಜ್ಞಾಪಕ ಶಕ್ತಿ ಹೆಚ್ಚಾಗಲು**

ಬಜೆ, ಪಿನಾರಿ, ತಿಮಾರ (ಒಂದೆಲಗೆ) ಬೇರನ್ನು ಅರೆದು ಬೆಳಗ್ಗೆ ತಿನ್ನಿಸಿದರೆ ಜ್ಞಾಪಕ ಶಕ್ತಿ ವೃದ್ಧಿಸುತ್ತದೆ. ಒಂದಲಗ ಸೊಪ್ಪನ್ನು ಬೆಳಿಗ್ಗೆ ಕತ್ತಲಿರುವಾಗಲೇ ಎದ್ದು ತಿಂದರೆ ಜ್ಞಾಪಕ ಶಕ್ತಿಗೆ ಒಳ್ಳೆಯದು.

**ಸಣ್ಣ ಮಕ್ಕಳ ಭೇದಿ**

ಪಡಮ್ಮಾಲೆ ಸೊಪ್ಪನ್ನು ತಂದು ಜೀರಿಗೆಯ ಜೊತೆ ಸೇರಿಸಿ ಚೆನ್ನಾಗಿ ಕುಟ್ಟಿ ರಸತೆಗೆದು ದಿನಕ್ಕೆ ೨-೩ಬಾರಿ ಕುಡಿಸಿದರೆ ಮಕ್ಕಳು ಬೇಧಿ ಕಡಿಮೆಯಾಗುತ್ತದೆ.

**ಹೊಟ್ಟೆನೋವು**

ಅಂಟುವಾಳಕಾಯಿ (ನೂರೆಕಾಯಿ)ಯನ್ನು ಅರೆದು ಬಂದ ರಸವನ್ನು ಸ್ವಲ್ಪ ನೆತ್ತಿಗೆ ಮತ್ತೆ ಸ್ವಲ್ಪ ರಸವನ್ನು ಹೊಕ್ಕಳಿಗೆ ಹಾಕಿ ತಿಕ್ಕಬೇಕು. ಹಾಗೂ ಒಂದು ಚಮಚದಷ್ಟು ರಸವನ್ನು ಕುಡಿದರೆ ಹೊಟ್ಟೆನೋವು ಕಡಿಮೆಯಾಗುತ್ತದೆ. ಇಡೀ ನೀರುಳ್ಳಿ (ಈರುಳ್ಳಿ)ಯನ್ನು ಕೆಂಡದಲ್ಲಿ ಸುಟ್ಟು ತಿಂದರೆ ಹೊಟ್ಟೆನೋವು ಕಡಿಮೆಯಾಗುತ್ತದೆ.

**ಬೆಳವಣಿಗೆ ಕುಂಠಿತ ಇರುವ ಮಕ್ಕಳಿಗೆ**

ಆಟೆಸೊಪ್ಪು ೫ ಎಲೆ, ಕುಪ್ಪಕೀರಿ ಹಿಡಿ, ಗಣಿಕೆಸೊಪ್ಪು ೧ ಹಿಡಿ ಈ ಎಲ್ಲಾ ಸೊಪ್ಪನ್ನು ನೀರಿನಲ್ಲಿ ಅರೆದು ಹಾಲು ಅಥವಾ ನೀರಿನಲ್ಲಿ ಬೆರೆಸಿ ಕುಡಿಯಬೇಕು. (ಮಕ್ಕಳಿಗೆ ೨, ಟೀ ಚಮಚ ದಿನಕ್ಕೆ ಎರಡು ಬಾರಿ ೩ ದಿನ ಈ ಔಷಧಿಯನ್ನು ಕುಡಿಸಬೇಕು)

**ಪಥ್ಯ**

ಜಿಡ್ಡು ಪದಾರ್ಥ ಹಾಗೂ ಮಾಂಸಾಹಾರವನ್ನು ೧೫ ದಿನ ಸೇವಿಸಬಾರದು.

**ಎದೆಯನೋವು:**

ಮೆಣಸಿನಕಾಳು, ತುಂಬೆಸೊಪ್ಪು, ಲೆಕ್ಕೆಸೊಪ್ಪು, ಬೆಳ್ಳುಳ್ಳಿ ಇವುಗಳನ್ನು ಅರೆದು ಜೇನುತಪ್ಪದಲ್ಲಿ ದಿನಕ್ಕೆ ೨ ಬಾರಿ ಸೇವಿಸಬೇಕು.

ಶೀತ

ಮೆಣಸಿನಕಾಳು, ಜೇನುತುಪ್ಪ, ಗೋಮೂತ್ರದಲ್ಲಿ ಅರೆದು ಸೋಸಿ, ಬೆಳಗ್ಗೆ ಎದ್ದಕೂಡಲೆ ಮಕ್ಕಳಿಗೆ ಕುಡಿಸಬೇಕು. ಹೀಗೆ ಮೂರುದಿನ ಕುಡಿಸಿದರೆ ಶೀತ ಕಡಿಮೆಯಾಗುತ್ತದೆ.

**ಮಕ್ಕಳಿಗೆ ಜ್ವರ, ಶೀತ, ಆದ್ರೆ**

ಸಾಂಬರ್ ಸೊಪ್ಪನ್ನು ಒಲೆಯ ಬೂದಿಗೆ ಹಾಕಿ ಬಾಡಿಸಿ ಮಕ್ಕಳ ನೆತ್ತಿಗೆ ಹಾಕಿ ಕಟ್ಟುವುದು ಹಾಗೂ ಮೂಗಿಗೆ ಮೂಸಿನೋಡಿಸಬೇಕು. ಆಗ ಜ್ವರ, ಶೀತ, ಕಡಿಮೆಯಾಗುತ್ತದೆ.

**ಮಕ್ಕಳಿಗೆ ದೃಷ್ಟಿ ಆದರೆ**

ಸಾಸಿವೆ, ಮೆಣಸು, ಉಪ್ಪು, ಬೆಳ್ಳುಳ್ಳಿ, ಒಣಮೆಣಸಿನಕಾಯಿ, ತಲೆಗೂದಲನ್ನು ಮಗುವಿನ ಮುಖಕ್ಕೆ ಮೂರು ಸಲ ಎಡಗೈಯಿಂದ ಮೇಲಿಂದ ಕೆಳಗೆ ಇಳೆದೆಗೆದು ಮೂರು ಸಲ ತೂ.. ತೂ.. ಎಂದು ಉಗುಳಿ ಒಲೆಯೊಳಗೆ ಹಾಕಬೇಕು. ಅದು ಜಾಸ್ತಿ ಗಾಟವಾದರೆ ದೃಷ್ಟಿ ಆಗಿಲ್ಲ ಅಂತ, ಗಾಟವಾಗಿಲ್ಲ ಅಂದ್ರೆ ದೃಷ್ಟಿ ಆಗಿದೆ ಎಂದು ತಿಳಿಯಲಾಗುತ್ತದೆ.

**ಮಕ್ಕಳು ಹಠ ಮಾಡ್ತಯಿದ್ದರೆ**

ತುಂಬೆಸೊಪ್ಪು, ಈರುಳ್ಳಿ, ಶುಂಠಿ, ಲಿಂಬೆಹುಳಿ, ಸಂಬಾರಬಳ್ಳಿ ಇವೆಲ್ಲವನ್ನು ಸಣ್ಣಗೆ ಜಜ್ಜಿ ರಸವನ್ನು ತೆಗೆದು ಮಕ್ಕಳಿಗೆ ದಿನಕ್ಕೆ ೨ ಬಾರಿಯಂತೆ ೪-೫ ದಿನ ಕುಡಿಸಿದರೆ ಜ್ವರ ಬರೋದಿಲ್ಲ ಮತ್ತು ಚಿಕ್ಕಮಕ್ಕಳು ಹಠಮಾಡೋದಿಲ್ಲ.

**ಮಕ್ಕಳ ಗಂಟಲು ಗುಳ್ಳೆಗೆ**

ಕಾವಟೆ ಕತ್ತೆಯ ರಸವನ್ನು ಹಿಂಡಿ ಬಿಳಿಬಟ್ಟೆಯಲ್ಲಿ ಅದ್ದಿ ಗಂಟಲಿನೊಳಗೆ ಒತ್ತಬೇಕು. ಹೀಗೆ ಮಾಡುವುದರಿಂದ ಗಂಟಲು ಗುಳ್ಳೆಗಳು ವಾಸಿಯಾಗುತ್ತವೆ.

**ತಲೆಯ ಮೇಲ್ಭಾಗ ನೆತ್ತಿ ಮೃದುವಾದುದಕ್ಕೆ**

ಹೊಂಗಾರಿ ಸೊಪ್ಪನ್ನು ಬೆಂಕಿಗೆ ಹಿಡಿದು ಅದರ ಕಾಖ ತಲೆಗೆ ಹಿಡಿದರೆ ಕ್ರಮೇಣ ನೆತ್ತಿ ಮೆತ್ತಗಾಗಿರುವುದು ಗಟ್ಟಿಯಾಗುತ್ತದೆ.

**ಹಲ್ಲು ಬಾರದಿದ್ದಕ್ಕೆ**

ಸಣ್ಣ ಮಕ್ಕಳಿಗೆ ಹಲ್ಲು ಬಾರದಿದ್ದರೆ ಭತ್ತದ ತುದಿಯಿಂದ ಹಲ್ಲಿನ ನಿಜಿಯನ್ನು ಗೀರಬೇಕು. ಹೀಗೆ ಮಾಡುವುದರಿಂದ ಹಲ್ಲು ಬೇಗನೆ ಬರುತ್ತವೆ.

**ಕಜ್ಜಿಗೆ**

ಕೇವುಳ ಹೂವಿನ ಸೊಪ್ಪು, ಕೆತ್ತೆ ಹೂವು, ತಂದು ಕಷಾಯ ಮಾಡಿ ಮಕ್ಕಳನ್ನು ಅದರಿಂದ ಸ್ನಾನ ಮಾಡಿಸಿದರೆ ಕಜ್ಜಿಯು ವಾಸಿಯಾಗುತ್ತವೆ.

**ಹುಟ್ಟಿದ ಮಗುವಿಗೆ ಕಫ ಆಗಿದ್ದರೆ**

ಕೇತಳ ಹೂ, ಸ್ವಲ್ಪ ಜೀರಿಗೆಯನ್ನು ಹಾಕಿ ಹಾಗೂ ನೀರುಹಾಕಿ ಅರೆದು ಮಗುವಿನ ಬಾಯಿಗೆ ಹಿಂಡಬೇಕು. ಇದರಿಂದ ಕಫ ಕಡಿಮೆಯಾಗುತ್ತದೆ.

**ಸಣ್ಣ ಮಗುವಿಗೆ ಹಾಲುಕುಡಿದು ನೀರು ಬೇಧಿ ಆಗುತ್ತಿದ್ದರೆ**

ಕುಂಜುಂಬೆಯ ತುದಿಯನ್ನು ೨ ಕರಿ ಮೆಣಸನ್ನು ಹಾಕಿ ಅರೆದು, ಕಬ್ಬಿಣ ಬಿಸಿ ಮಾಡಿ ರಸದಲ್ಲಿ ಬಿಟ್ಟು, ಆ ರಸವನ್ನು ಮಗುವಿಗೆ ಕುಡಿಸಬೇಕು. ಜೊತೆಗೆ ಕಾದಾರಿದ ನೀರನ್ನು ಇಟ್ಟುಕೊಂಡಿರಬೇಕು. (ಖಾರ ಜಾಸ್ತಿಯಾದರೆ ಕುಡಿಸುವ ಸಲುವಾಗಿ) ಆಗ ನೀರು ಬೇಧಿಯಾಗುವುದು ಕಡಿಮೆಯಾಗುತ್ತದೆ.

**ಸಣ್ಣ ಮಕ್ಕಳಿಗೆ ಬೇಧಿಯಾದರೆ**

ಎದೆಹಾಲು ನಿಲ್ಲಿಸಿದಾಗ ಮಕ್ಕಳಿಗೆ ಕೆಲವೊಮ್ಮೆ ಸಿಂಬಳ ಬೇಧಿ ಆರಂಭವಾಗುತ್ತದೆ. ಆಗ ಪೇರಳೆ, ನೆಲ್ಲಿ, ಎಂಬೆಲು ತುದಿಯನ್ನು ಮೊಸರಿನಲ್ಲಿ ಜೀರಿಗೆ ಹಾಕಿ ಅರೆದು ತಿನ್ನಿಸಬೇಕು. ಆಗ ಬೇಧಿಯಾಗುವುದು ಕಡಿಮೆಯಾಗುತ್ತದೆ.

**ಸಣ್ಣ ಮಕ್ಕಳಿಗೆ ಹೊಟ್ಟೆನೋವು ಆದರೆ**

ವೀಳ್ಯೆದೆಲೆ ೫, ಬೆಳ್ಳುಳ್ಳಿ ೫, ಒಳ್ಳೆ ಮೆಣಸು ೫, ಇವಿಷ್ಟನ್ನು ಸೇರಿಸಿ ಚೆನ್ನಾಗಿ ಅರೆದು ೨ ಲೋಟಕ್ಕೆ ಹಾಕಿ ಸ್ವಲ್ಪ ಉಪ್ಪನ್ನು ಹಾಕಿ ಬೆಳಗ್ಗೆ, ರಾತ್ರಿಯಂತೆ, ೨ ದಿನ ಮಗುವಿಗೆ ಕುಡಿಸಿದರೆ ಹೊಟ್ಟೆನೋವು ಕಡಿಮೆಯಾಗುತ್ತದೆ.

**ಒಂದು ವರ್ಷದೊಳಗಿನ ಮಗುವಿಗೆ ಶೀತ ಜ್ವರ ಬಂದರೆ**

ಬಜೆಯನ್ನು ತೇದಿ ಮಗುವಿನ ಹಣೆಗೆ, ಎದೆಗೆ ಹಚ್ಚುವುದರಿಂದ ಶೀತ ಜ್ವರ ಕಡಿಮೆಯಾಗುತ್ತದೆ.

**ಕಫ ನೀರಾಗಲು**

ಆಡುಸೋಗೆ ಸೊಪ್ಪು ೪, ಇದನ್ನು ಹೊಗೆಯಲ್ಲಿ ಬೇಯಿಸಿ, ಒಂದು ನೀರುಳ್ಳಿ, ಒಂದು ಇಂಚು ಶುಂಠಿ, ಎರಡು ದೊಡ್ಡ ವೀಳ್ಯೆದೆಲೆ, ಸಂಬಾರ ಬಳ್ಳಿ ಸೊಪ್ಪು ೫, ಹಳದಿಗೋರಟೆಸೊಪ್ಪು ೪, ಇವಿಷ್ಟನ್ನು ಒಣ ಜಾಗದಲ್ಲಿ ಜಜ್ಜಿ ಬಟ್ಟೆಯಿಂದ ಹಿಂಡಿ ರಸ ತೆಗೆದು, ಈ ರಸಕ್ಕೆ ಅರ್ಧ ಲಿಂಬೆ ಹಣ್ಣಿನ ರಸ ಹಾಕಿ, ರಸದ ಅರ್ಧಭಾಗಕ್ಕೆ ಜೇನು ಬೆರಿಸಿ ಚೆನ್ನಾಗಿ ಕಲಕಿ ಬೆಳಿಗ್ಗೆ, ರಾತ್ರಿ ಸಣ್ಣ ೧೦ ಚಮಚದಷ್ಟು ತೆಗೆದುಕೊಂಡರೆ, ಎದೆಯಲ್ಲಿ ಗಟ್ಟಿಯಾಗಿರುವ ಕಫ ನೀರಾಗಿ ಹೋಗುತ್ತದೆ. ಇದನ್ನು ೩ ರಿಂದ ೭ ದಿನಗಳವರೆಗೆ ಕುಡಿಸಬೇಕು. (ಈ ಔಷಧವನ್ನು ಎಲ್ಲಾ ವಯಸ್ಸಿನವರೂ ಸೇವಿಸಬಹುದು).

**ತುರಿಕೆ ಕಜ್ಜಿ**

ಸ್ವಲ್ಪ ಜಾಜಿ ಸೊಪ್ಪು, ಅರಸಿನ, ಕಪ್ಪು ಜೀರಿಗೆಯನ್ನು ಸೇರಿಸಿ ಎಣ್ಣೆಯನ್ನು ಕಾಯಿಸಿ ಸೇರಿಸಿ ಕಜ್ಜಿಗೆ ದಿನಕ್ಕೆ ೨ ಬಾರಿಯಂತೆ ಒಂದು ವಾರ ಹಚ್ಚುವುದರಿಂದ ತುರಿಕೆ ಕಜ್ಜಿ ವಾಸಿಯಾಗುತ್ತದೆ.

**ಹುಟ್ಟಿದ ಮಗುವಿಗೆ ಮೂತ್ರ ಹೋಗದಿದ್ದರೆ**

ನಾಮವನ್ನು ನೀರಲ್ಲಿ ಕಲಸಿ ಹೊಕ್ಕಳಿಗೆ ಸುತ್ತಲು ಹಚ್ಚಬೇಕು. ಸ್ವಲ್ಪ ಹೊತ್ತಿನ ನಂತರ ಮೂತ್ರ ಬರುತ್ತವೆ. (ಸ್ವಲ್ಪ ಬೂದಿಯನ್ನು ಮೈಯಿಗೆಲ್ಲ ಸವರಬಹುದು).

**ಮಗುವಿನ ಕಣ್ಣಲ್ಲಿ ಹುಳುಕು ಬಂದರೆ**

೧ ಚಮಚ ತಾಯಿಯ ಎದೆಹಾಲು ಕಣ್ಣಿಗೆ ಹಾಕುವುದು ಅಥವಾ ಕೊತ್ತಂಬರಿಯನ್ನು ಬಿಳಿಬಟ್ಟೆಯಲ್ಲಿ ನೆನಸಿ ಅದರ ನೀರನ್ನು ಕಣ್ಣಿಗೆ ಬಿಡಬಹುದು. ಕಣ್ಣಿನ ಹುಳುಕು ವಾಸಿಯಾಗುತ್ತದೆ.

**ಮಗುವಿನ ನಾಲಗೆಯಲ್ಲಿ ಅಗ್ರ ಆದರೆ**

ಹತ್ತಿ ಬಟ್ಟೆಯನ್ನು ಒದ್ದೆಮಾಡಿ ಮೆಲ್ಲನೆ ನಾಲಿಗೆಗೆ ಸವರಬೇಕು. ಹೀಗೆ ೨-೩ ದಿನ ಹೀಗೆ ಮಾಡ್ತಾ ಇದ್ದರೆ ಅಗ್ರ ವಾಸಿಯಾಗುತ್ತದೆ.

**ಸಣ್ಣ ಮಗುವಿಗೆ ಕಫ ಜಾಸ್ತಿಯಾದರೆ**

ನೀರುಳ್ಳಿ ರಸ ತೆಗೆದು ಸ್ವಲ್ಪ ಜೇನುತುಪ್ಪ ಹಾಕಿ ಕುಡಿಸುವುದರಿಂದ ಕಫ ಕಡಿಮೆಯಾಗುತ್ತದೆ.

**ಸಣ್ಣ ಮಕ್ಕಳಿಗೆ ಶೀತ ಬಂದರೆ**

ನಾಗದಾಳ ಸೊಪ್ಪಿನ ರಸ ೨ ತೊಟ್ಟು ಕರಿ ತುಳಸಿ ರಸ೨ ತೊಟ್ಟು ದೊಡ್ಡಪತ್ರೆ ರಸ೨ ತೊಟ್ಟು. ಈ ಎಲ್ಲಾ ರಸವನ್ನು ಮಿಶ್ರಮಾಡಿ ಜೇನು ತುಪ್ಪವನ್ನು ಬೆರೆಸಿ ಮಗುವಿಗೆ ದಿನಕ್ಕೆ ಮೂರು ಸಲ ನೆಕ್ಕಿಸುವುದರಿಂದ ಶೀತವಾಸಿಯಾಗುತ್ತದೆ.

**ಮಕ್ಕಳ ಹೊಟ್ಟೆಯಲ್ಲಿ ಹುಳು ಆದಾಗ**

೧. ಚಿಕ್ಕ ತೊಂಡೆಕಾಯಿ ಗಿಡದ ಎಲೆಯನ್ನು ಮುಳ್ಳುತೆಗೆದು ಬಿಸಿನೀರಿನಲ್ಲಿ ತೊಳೆದು ರಸವನ್ನು ತೆಗೆದು ದಿನಕ್ಕೆ ೨ ಬಾರಿಯಂತೆ ಸೇವಿಸಿದರೆ ಹೊಟ್ಟೆಯಲ್ಲಿನ ಹುಳು ವಾಸಿಯಾಗುತ್ತದೆ.

೨. ಗಣಿಕೆ ಸೊಪ್ಪಿನ ರಸವನ್ನು ತೆಗೆದು ಕುಡಿಯಲು ಕೊಡಲಾಗುತ್ತದೆ.

೩. ೩ ವರ್ಷ ವಯಸ್ಸು ಆದ ಮಕ್ಕಳಿಗೆ, ಪಪ್ಪಾಯಿ ಹಣ್ಣನ್ನು ಅಗೆದು ತಿನ್ನಲು ಕೊಟ್ಟರೆ ಹುಳ ಕಡಿಮೆಯಾಗುತ್ತದೆ.

**ಹೊಟ್ಟೆ ಉಬ್ಬಸ ಬಂದಾಗ**

ಹೊಕ್ಕಳ ಸುತ್ತ ಹರಳೆಣ್ಣೆ ಹಚ್ಚಿ ವೀಳ್ಯದ ಎಲೆಯನ್ನು ಹಂಚಿನ ಮೇಲೆ ಹಾಕಿ ಬಿಸಿ ಮಾಡಿ ಹೊಕ್ಕಳದ ಮೇಲ್ಭಾಗದಲ್ಲಿ ಮುಚ್ಚಿ ತೆಳ್ಳಗಿನ ಬಟ್ಟೆಯನ್ನು ಕಟ್ಟಬೇಕು. ರಾತ್ರಿಯಿಂದ ಬೆಳಗಾಗುವವರೆಗೆ ಕಟ್ಟಿರಬೇಕು. ಆಗ ಉಬ್ಬಸ ಕಡಿಮೆಯಾಗುತ್ತದೆ.

ರೊಟ್ಟಿ ಮಾಡುವ ತೆವವನ್ನು (ಹಂಚನ್ನು) ಸ್ವಚ್ಛಮಾಡಿ, ವೊಮಕ್ಕಿಯನ್ನು ಹಾಕಿ ಬಿಸಿಮಾಡಿ ಒಂದು ಲೋಟ ನೀರನ್ನು ಅರ್ಧಲೋಟ ನೀರು ಆಗುವವರಿಗೆ ಕಾಯಿಸಿ, ೨ ಚಮಚದಷ್ಟು ದಿನದಲ್ಲಿ

೩ ಬಾರಿ ಕುಡಿದರೆ ಉಬ್ಬಸ ಕಡಿಮೆಯಾಗುತ್ತದೆ. (ದೊಡ್ಡವರು ಸಹ ಈ ಔಷಧಿಯನ್ನು ತೆಗೆದುಕೊಳ್ಳಬಹುದು).

**ಅಸ್ತಮಾ ಆದರೆ**

೫ ರಿಂದ ೧೦ವರ್ಷ ವಯಸ್ಸಿನ ಮಕ್ಕಳಿಗೆ ಕೊಡುವ ಔಷಧಿ ಇದಾಗಿರುತ್ತದೆ. ಒಂದು ಲೋಟ ಹಾಲಿಗೆ ೫-೬ ಜವಾರಿ ಬೊಳ್ಳೊಳ್ಳಿಯನ್ನು ಹಾಕಿ, ಅರ್ಧ ಲೋಟ ಆಗುವವರೆಗೆ ಚೆನ್ನಾಗಿ ಕುದಿಸಿ ಕುಡಿಸಬೇಕು. ಹೀಗೆ ಪ್ರತಿದಿನ ೨ ಹೊತ್ತು ಅಸ್ತಮ ಕಡಿಮೆಯಾಗುವವರಿಗೆ ಕುಡಿಸುತ್ತಿರಬೇಕು.

**ಮಕ್ಕಳ ಮೂತ್ರ ವಾಸನೆ ಇದ್ದರೆ**

ಪಂಚಪತ್ರೆ ಎಲೆಯ ರಸವನ್ನು ತೆಗೆದು ಮಗುವಿಗೆ ದಿನಕ್ಕೆ ಎರಡು ಬಾರಿ ಕುಡಿಸುತ್ತಾ ಇದ್ದರೆ ಮೂತ್ರದ ವಾಸನೆ ಕಡಿಮೆಯಾಗುತ್ತದೆ.

**ಮಕ್ಕಳ ಹೊಟ್ಟೆನೋವು**

ಚಿಕ್ಕ ಮಕ್ಕಳಿಗೆ ಅಜಿವಾನವನ್ನು ತಿಂದು ಅದರ ಗಾಳಿಯನ್ನು ಮಕ್ಕಳ ಬಾಯಿಗೆ, ಕಿವಿಗೆ, ಹೊಕ್ಕಳಿಗೆ ಉದುವುದರಿಂದ ಹೊಟ್ಟೆನೋವು ಕಡಿಮೆಯಾಗುತ್ತದೆ. ದಿನಕ್ಕೆ ೨-೩ ಬಾರಿ ಹೀಗೆ ಮಾಡಬೇಕು. ದೊಡ್ಡವರಿಗೆ ಕರಿವಿಳ್ಯದೆಲೆ ಮತ್ತು ಉಪ್ಪನ್ನು ಸಮಪ್ರಮಾಣದಲ್ಲಿ ಸೇವಿಸುವುದರಿಂದ ಹೊಟ್ಟೆನೋವು ಕಡಿಮೆಯಾಗುತ್ತದೆ.

**ಮಕ್ಕಳಿಗೆ ಗಾಯವಾದರೆ**

ಅರಿಸಿನ ಮತ್ತು ಎಣ್ಣೆಯನ್ನು ಕಲಸಿ ರಾತ್ರಿಯಲ್ಲಿ ಹಚ್ಚುವುದರಿಂದ ಗಾಯ ವಾಸಿಯಾಗುತ್ತದೆ. ಹೀಗೆ ೪-೫ ದಿನ ಹಿಂಗೆ ಹಚ್ಚಬೇಕು.

**ಮಕ್ಕಳಿಗೆ ನಾಯಿ ಕಚ್ಚಿದರೆ**

ನಾಯಿ ಕಡಿದ ಜಾಗಕ್ಕೆ ಸುಣ್ಣವನ್ನು ಹಚ್ಚುವುದರಿಂದ ಹಾಗೂ ನಾಯಿಯನ್ನು ಸಾಕಿದವರ ಮನೆಯಿಂದ ತಂಗುಳ ರೊಟ್ಟಿಯನ್ನು ತಿನ್ನುವುದರಿಂದ ಗಾಯ ಬೇಗನೇ ವಾಸಿಯಾಗುತ್ತದೆ.

**ಮಂಗನಬಾವು ಆದರೆ**

ಮಂಗನ ಬಾವು ಬಂದರೆ ಸಾರಂಗದ ಕೋಡು, ನಾರುಬೇರನ್ನು ಮತ್ತು ಅರಿಶಿಣವನ್ನು ಸಮಪ್ರಮಾಣದಲ್ಲಿ ತೇಯ್ದು ದಿನಕ್ಕೆ ೨ ಬಾರಿಯಂತೆ ಹೀಗೆ ೩ ದಿನಗಳ ಕಾಲ ಲೇಪಿಸಿದರೆ ಬೇಗ ಗುಣಮುಖವಾಗುತ್ತದೆ.

**ಚಿಕ್ಕಮಕ್ಕಳಿಗೆ ಜ್ವರಬಂದರೆ**

ಜ್ವರ ಬಂದ ಮಗುವಿನ ನೆತ್ತಿಗೆ (ಅಳ್ಳತ್ತಿ) ಹಾಗೂ ಮೈಗೆ ಆಡಿನ ಹಸಿ ಹಾಲನ್ನು ಹಚ್ಚುವುದರಿಂದ ೧೦-೧೫ ನಿಮಿಷದಲ್ಲಿ ಜ್ವರ ಕಡಿಮೆಯಾಗುತ್ತದೆ.

**ಹೊಟ್ಯಾಂದ ಏಳೂದು ಕೂಸುಗಳಿಗೆ**

ಕತ್ತೆಯ ಹಾಲನ್ನು ಕುಡಿಸುವುದರಿಂದ ಹೊಟ್ಯಾಂದ ಏಳೂದು ಕಡಿಮೆಯಾಗುತ್ತದೆ. ರೊಟ್ಟಿ ಮಾಡುವ ತವೆಯ ಮಸಿಯನ್ನು ನೀರಿನಲ್ಲಿ ಕುಡಿಸುವುದರಿಂದ ಹೊಟ್ಯಾಂದ ಏಳೂದು ಕಡಿಮೆಯಾಗುತ್ತದೆ.

**ಮಕ್ಕಳಿಗೆ ಕೆಮ್ಮು, ಕಫ, ಉಸಿರಾಟದ ತೊಂದರೆಯಾದರೆ**

ಜರ್ಮನಿ ತೊಪ್ಪಲಿನ ೪ ಎಲೆಯನ್ನು ಸಣ್ಣಗೆ ಕುಟ್ಟಿ ಅದರ ರಸವನ್ನು ಬಿಳಿಬಟ್ಟೆಯಿಂದ ಸೋಸಿ, ಅದರ ರಸ ತೆಗೆದು ಮಕ್ಕಳಿಗೆ ಕುಡಿಸಿದ್ರೆ ಕಫ, ಕೆಮ್ಮು ಉಸಿರಾಟದ ತೊಂದರೆಯು ಕಡಿಮೆಯಾಗುತ್ತದೆ.

**ಹಲ್ಲು ಬರುವಾಗ ಬೇಧಿ ಮತ್ತು ಜ್ವರ ಬಂದರೆ**

ಐಕ್‌ಮಲಿಯನ್ನು ಚೆನ್ನಾಗಿ ಕುಟ್ಟಿ ಪುಡಿಮಾಡಿ ಅದರಲ್ಲಿ ಸಕ್ಕರೆ ಸೇರಿಸಿ ಮಕ್ಕಳಿಗೆ ದಿನಕ್ಕೆ ೨ ಬಾರಿ ಲೇಪಿಸಿದರೆ ಹಲ್ಲು ಬರುವಾಗ ಆಗುವ ಬೇಧಿ ಜ್ವರದ ತೊಂದರೆ ತಪ್ಪುತ್ತದೆ.

**ಮಕ್ಕಳಿಗೆ ಬೇದಿ ಆಗುತ್ತಿದ್ದರೆ**

ತುರುಬಿನ ಕಸದ ರಸವನ್ನು ಜಜ್ಜಿ ರಸವನ್ನು ತೆಗೆದು ಕುಡಿಸುವುದರಿಂದ ಬೇದಿ ಕಡಿಮೆಯಾಗುತ್ತದೆ. ಹೀಗೆ ದಿನಕ್ಕೆ ೧ ಬಾರಿಯಂತೆ ೩ ದಿನಗಳ ಕಾಲ ಕುಡಿಸುವುದರಿಂದ ಕಡಿಮೆಯಾಗುತ್ತದೆ.

**ಕೆಮ್ಮಾಗಿದ್ದರೆ**

ತುಳಸಿ ತಪ್ಪಲನ್ನು ಜಜ್ಜಿ ರಸವನ್ನು ತೆಗೆದು ಅದನ್ನು ಸ್ವಲ್ಪ ಬಿಸಿಮಾಡಿ ಮಕ್ಕಳಿಗೆ ಗುಟಕ ಹಾಕುತ್ತಿದ್ದರೆ ಕೆಮ್ಮು ಕಡಿಮೆಯಾಗುತ್ತದೆ.

**ಜಂತುಹುಳು ಆದರೆ**

ಆಡಿಸೊಪ್ಪಿನ ಬೇರನ್ನು ತೇಯ್ದು ೧ ಚಮಚವನ್ನು ಖಾಲಿ ಹೊಟ್ಟೆಯಲ್ಲಿ ಕುಡಿಯಬೇಕು. ಹೀಗೆ ೩-೪ ದಿನಗಳವರೆಗೆ ಹೀಗೆ ಕುಡಿಯುತ್ತಿರಬೇಕು.

**ಮಗು ತೊದಲುತ್ತಿದ್ದರೆ**

ಬಜೆ ಬೇರನ್ನು ತೇದಿ ನಾಲಿಗೆಗೆ ಉಜ್ಜುವುದರಿಂದ ಮಕ್ಕಳಿಗೆ ಇರುವ ತೊದಲು ರೋಗ ಕಡಿಮೆ ಆಗುತ್ತದೆ.

**ಗಂಟು ನೋವು**

ಆಡುಸೋಗೆ ಸೊಪ್ಪನ್ನು ಬಿಸಿ ಮಾಡಿ ಗಂಟು ನೋವಿಗೆ ಶಾಖ ಕೊಡಬೇಕು. ಹೀಗೆ ೩ ದಿನ ಶಾಖ ಕೊಡುವುದರಿಂದ ಗಂಟುನೋವು ಕಡಿಮೆಯಾಗುತ್ತದೆ.

**೩.೩. ಸಾಮಾನ್ಯ ಹಾಗೂ ವಿಶಿಷ್ಟ ಕಾಯಿಲೆಗಳು ಮತ್ತು ರೋಗ ನಿವಾರಣಾ ವಿಧಾನ**

೧. ಜ್ವರ: ಶುಂಠಿ, ಕೊತ್ತಂಬರಿ ಕಾಳು, ಲವಂಗ, ಬೆಲ್ಲ, ಹಾಲು ಹಾಕಿ ಕಷಾಯ ಮಾಡಿಕೊಂಡು ಕುಡಿಯುವುದರಿಂದ ಜ್ವರ ಕಡಿಮೆಯಾಗುತ್ತದೆ.

೨. ತುಳಸಿ ರಸಕ್ಕೆ ಕರಿಮೆಣಸಿನ ಪುಡಿ ಮತ್ತು ಒಂದು ಚಮಚ ಜೇನು ತುಪ್ಪಸೇರಿಸಿ ದಿನಕ್ಕೆರಡು ಬಾರಿ ಕುಡಿದರೆ ಜ್ವರ ಕಡಿಮೆಯಾಗುತ್ತದೆ.

**ಕೆಮ್ಮು**

ಅವರೆಕಾಳು ಗಾತ್ರದಷ್ಟು ಒಣಶುಂಠಿಗೆ ಅಷ್ಟೇ ಗಾತ್ರದ ಕಲ್ಲುಸಕ್ಕರೆ ಸೇರಿಸಿ ದಿನಕ್ಕೆ ೩-೪ ಬಾರಿಯಂತೆ ೨-೩ ದಿನಗಳವರೆಗೆ ಬಿಸಿ ನೀರಿನೊಂದಿಗೆ ಸೇವಿಸಬೇಕು. ಇದರಿಂದ ನೆಗಡಿ ಮತ್ತು ಕೆಮ್ಮು ಎರಡೂ ಗುಣವಾಗುತ್ತದೆ.

೧. ರಾತ್ರಿ ಮಲಗುವಾಗ ಪುಟಾಣಿ, ಉಪ್ಪು ತಿಂದು ನೀರು ಕುಡಿಯದೇ ಮಲಗಿದರೆ ಒಣಕೆಮ್ಮು ಕಡಿಮೆಯಾಗುತ್ತದೆ.

೨. ಕರಿಮೆಣಸು, ಲವಂಗ ಮತ್ತು ಉಪ್ಪು ಇವುಗಳನ್ನು ಅರೆದು ರಸವನ್ನು ಕುಡಿಯುವುದರಿಂದ ಕೆಮ್ಮು ಕಡಿಮೆಯಾಗುತ್ತದೆ.

೩. ಬೆಳ್ಳುಳ್ಳಿ, ಮೆಣಸು, ಎಲೆತುಂಬು ಹಾಕಿ ಅನ್ನಮಾಡಿ ತಿನ್ನುವುದರಿಂದ ಕೆಮ್ಮು ವಾಸಿಯಾಗುತ್ತದೆ.

೪. ಒಂದು ಲೋಟ ಹಾಲಿಗೆ ಅರ್ಧ ಚಮಚದಷ್ಟು ಅರಿಷಿಣಪುಡಿಯನ್ನು ಹಾಕಿ ಕುದಿಸಿ ಬಿಸಿ ಹಾಲನ್ನೇ ಕುಡಿಯುವುದರಿಂದ ನೆಗಡಿ ಮತ್ತು ಕೆಮ್ಮು ಕಡಿಮೆಯಾಗುತ್ತದೆ.

**ನೆಗಡಿ**

ಕೆಂಡದ ಮೇಲೆ ಒಂದು ಚಿಟಿಕೆ ಅರಿಶಿಣ ಉದುರಿಸಿ ಹೊಗೆಯನ್ನು ಊದುಕೊಳವೆಯ ಮೂಲಕ ನಿಧಾನವಾಗಿ ಉಸಿರಾಡುವುದರಿಂದ ನೆಗಡಿಯಿಂದ ನೀರಿನಂತೆ ಸುರಿಯುವ ಸಿಂಬಳ ಕಡಿಮೆಯಾಗುತ್ತದೆ.

೧. ಶುಂಠಿಯ ಕಷಾಯಕ್ಕೆ ಸಕ್ಕರೆ ಬೆರಸಿ ದಿನದಲ್ಲಿ ಎರಡು ಬಾರಿ (ಬೆಳಿಗ್ಗೆ-ರಾತ್ರಿ) ಕುಡಿಯುವುದರಿಂದ ನೆಗಡಿ ನಿಲ್ಲುತ್ತದೆ.

೨. ಪುದಿನಾಸೊಪ್ಪಿನ ಚಹಾ ತಯಾರಿಸಿ ಒಂದೆರಡು ಬಾರಿ ಕುಡಿಯುವುದರಿಂದಲೂ ನೆಗಡಿ, ಕೆಮ್ಮು ನಿಲ್ಲುವುದು.

೩. ಜೀರಿಗೆ, ಕರಿಬೇವು, ಮೆಣಸು ಕುದಿಸಿ ಬೆಲ್ಲ ಹಾಕಿ ಕಷಾಯ ಮಾಡಿಕೊಂಡು ಕುಡಿಯುವುದರಿಂದ ನೆಗಡಿ ಕಡಿಮೆಯಾಗುತ್ತದೆ.

**ಗಾಯ/ಹುಣ್ಣು**

೧. ಅರಿಶಿಣ ಪುಡಿ ಹಾಕಿ ಹಿಡಿದರೆ ರಕ್ತ ಸೋರುವುದು ನಿಲ್ಲುವುದು.

೨. ಕಾಫಿ ಪುಡಿಯನ್ನು ಹಾಕಿದರೆ ಗಾಯ ಕಡಿಮೆಯಾಗುತ್ತದೆ.

೩. ಕತ್ತರಿಸಿ ಇಲ್ಲವೆ ತರಚಿ ಉಂಟಾದ ಗಾಯಕ್ಕೆ ವೀಳ್ಯದ ಎಲೆಯ ರಸ ಹಚ್ಚುವುದರಿಂದ ಗಾಯ ಕಡಿಮೆಯಾಗುತ್ತದೆ.

೪. ಗಾಯ ಬೇಗ ವಾಸಿಯಾಗದೇ ನೊಣಗಳು ಕುಳಿತು ಗುಳಿ ಬಿದ್ದಲ್ಲಿ ಬೆಳ್ಳುಳ್ಳಿಯನ್ನು ಚೆನ್ನಾಗಿ ಅರೆದು ಗಾಯದ ಮೇಲೆ ಪಟ್ಟುಹಾಕಿದರೆ ಕ್ರಮೇಣ ಗಾಯ ವಾಸಿಯಾಗುತ್ತದೆ.

೫. ಅಕ್ಕಿಯ ಮುದ್ದೆಯನ್ನು ಮಾಡಿ ಪಟ್ಟು ಹಾಕಿದರೆ ಕುರುವಿನ ಕೀವು ಹೊಡೆದು ಹಗುರವಾಗುತ್ತದೆ.

೬. ವಿಭೂತಿ ಮತ್ತು ಬೆಣ್ಣೆಯನ್ನು ಚೆನ್ನಾಗಿ ಕಲಿಸಿ ಕುರುವಿಗೆ ಹಚ್ಚಿದರೆ ಕುರುವಿನ ಕೀವು ಒಡೆದು ಗಾಯ ವಾಸಿಯಾಗುತ್ತದೆ.

೭. ಒಂದೆರಡು ಚಮಚ ಕೊಬ್ಬರಿ ಎಣ್ಣೆಗೆ ಅರ್ಧ ಚಮಚದಷ್ಟು ಸುಣ್ಣದ ತಿಳಿನೀರನ್ನು ಸೇರಿಸಿ ಸುಟ್ಟಗಾಯದ ಮೇಲೆ ಹಚ್ಚುವುದರಿಂದ ಉರಿ ಕಡಿಮೆಯಾಗುತ್ತದೆ.

೮. ಸುಟ್ಟ ಗಾಯದ ಮೇಲೆ ಕೂಡಲೇ ಜೇನುತುಪ್ಪ ಸವರಿದರೆ ಉರಿ ಕಡಿಮೆಯಾಗುತ್ತದೆ. ಮತ್ತು ಬೊಬ್ಬೆಗಳು ಏಳುವುದಿಲ್ಲ.

೯. ಬಾಣ ಸುಟ್ಟಾಗ ಆಗುವ ಗಾಯಕ್ಕೆ ಕೂಡಲೇ ಆಲೂಗಡ್ಡೆಯನ್ನು ಜಜ್ಜಿ ಹಚ್ಚಿದರೆ ಉರಿ ಮತ್ತು ನೋವು ಕಡಿಮೆಯಾಗಿ ಗಾಯ ವಾಸಿಯಾಗುತ್ತದೆ.

**ಮಲಬದ್ಧತೆ**

೧. ಪ್ರತಿದಿನ ಮಲಗುವ ಮುಂಚೆ ಬಾಳೆಹಣ್ಣನ್ನು ತಿನ್ನುವುದರಿಂದ ಮಲಬದ್ಧತೆಯಾಗುವುದಿಲ್ಲ.

೨. ಪ್ರತಿದಿನ ರಾತ್ರಿ ಮಲಗುವ ಮುಂಚೆ ೪-೫ ಖರ್ಜೂರಗಳನ್ನೂ ತಿನ್ನುವುದರಿಂದ ಮಲಬದ್ಧತೆಯಾಗುವುದಿಲ್ಲ.

೩. ಪ್ರತಿದಿನ ಬರೀ ಹೊಟ್ಟೆಗೆ ಒಂದು ಲೋಟ ಬಿಸಿ ನೀರಿಗೆ ಒಂದು ನಿಂಬೆಹಣ್ಣಿನ ರಸ ಹಿಂಡಿ ಸ್ವಲ್ಪ ಉಪ್ಪು ಸೇರಿಸಿ ಕುಡಿಯುವುದರಿಂದ ಮಲಬದ್ಧತೆ ನಿವಾರಣೆಯಾಗುತ್ತದೆ.

೪. ರಾತ್ರಿ ಮಲಗುವ ಮುನ್ನ ೧-೨ ಚಮಚ ತ್ರಿಫಲಚೂರ್ಣವನ್ನು ಅರ್ಧ ಲೋಟ ನೀರಿಗೆ ಬೆರೆಸಿ ಕುಡಿಯುವುದರಿಂದ ಮಲಬದ್ಧತೆ ಕಡಿಮೆಯಾಗುತ್ತದೆ.

**ವಾಂತಿ**

೧. ರೇಷ್ಮೆ ದವನ, ಜೇನುತುಪ್ಪ ನೆಕ್ಕುವುದುರಿಂದ ವಾಂತಿ ಕಡಿಮೆಯಾಗುತ್ತದೆ.

೨. ನಿಂಬೆಹಣ್ಣು ಸುಟ್ಟು ಬಂದ ಕಪ್ಪು ಬೂದಿಗೆ ಜೇನುತುಪ್ಪ ಕಲಿಸಿ ವಾಂತಿ ಕಾಯಿಲೆಯಿಂದ ನರಳುವವರಿಗೆ ನೆಕ್ಕಿಸಿದರೆ ವಾಂತಿ ಕಡಿಮೆಯಾಗುತ್ತದೆ.

೩. ಉಪ್ಪು, ಜೇನುತುಪ್ಪ ನೆಕ್ಕುವುದು ಇದರಿಂದ ವಾಂತಿ ಗುಣವಾಗುತ್ತದೆ.

೪. ಒಂದು ಚಮಚ ನಿಂಬೆಹಣ್ಣಿನ ರಸಕ್ಕೆ ಒಂದೆರಡು ಚಮಚ ಜೇನುತುಪ್ಪ ಸೇರಿಸಿ ಆಗ್ಗಿಂದಾಗ್ಗೆ ಮಿಶ್ರಣವನ್ನು ಬಾಯಿಗೆ ಹಾಕಿಕೊಂಡು ಚಪ್ಪರಿಸುವುದರಿಂದ ವಾಂತಿ ಕಡಿಮೆಯಾಗುತ್ತದೆ.

೫. ಏಲಕ್ಕಿ ಸಿಪ್ಪೆ ಬಿಡಿಸಿ ಕಾಳುಗಳನ್ನು ಬಾಯಿಗೆ ಹಾಕಿಕೊಳ್ಳುವುದರಿಂದ ವಾಂತಿ ಕಡಿಮೆಯಾಗುತ್ತದೆ.

೬. ಒಂದು ಲೋಟ ಎಳೆ ನೀರಿಗೆ ಒಂದು ಚಿಟಿಕೆ ಏಲಕ್ಕಿ ಪುಡಿ ಮತ್ತು ಒಂದು ಚಮಚ ಜೇನುತುಪ್ಪ ಸೇರಿಸಿ ಆಗಾಗ ಕುಡಿಯುತ್ತಿರುವುದರಿಂದ ವಾಂತಿ ಕಡಿಮೆಯಾಗುತ್ತದೆ.

**ಹಲ್ಲು ನೋವು**

೧. ನೋವಾಗುತ್ತಿರುವ ಹಲ್ಲಿಗೆ ಲವಂಗದೆಣ್ಣೆ ಹಚ್ಚುವುದರಿಂದ ನೋವು ಶಮನವಾಗುತ್ತದೆ.

೨. ಒಂದೆರಡು ಕಾಳು ಕರಿಮೆಣಸಿಗೆ ೩-೪ ಲವಂಗವನ್ನು ಸೇರಿಸಿ ಕುಟ್ಟಿ ನೋವಿರುವ ಹಲ್ಲಿನ ಸುತ್ತ ಸವರಿದರೆ ನೋವು ಕಡಿಮೆಯಾಗುತ್ತದೆ.

೩. ವಸಡು ಹುಣ್ಣಾಗಿ ನೋವು ಬಂದರೆ ಒಂದೆರಡು ಪಲಕು ಬೆಳ್ಳುಳ್ಳಿಗೆ ಸ್ವಲ್ಪ ಉಪ್ಪು ಸೇರಿಸಿ ಅರೆದು ನೋವಿರುವ ಜಾಗದ ಸುತ್ತ ಹಚ್ಚಬೇಕು.

೪. ತುಂಬಾಕಿನ ಸೊಪ್ಪು, ನಶ್ಯ ಹಚ್ಚುವುದರಿಂದಲೂ ಹಲ್ಲುನೋವು ಕಡಿಮೆಯಾಗುತ್ತದೆ.

೫. ಯಕ್ಕಿ ಹಾಲು ತಿಕ್ಕಿದರೆ ಹಲ್ಲುನೋವು ಕಡಿಮೆಯಾಗುತ್ತದೆ.

**ಕಿವಿನೋವು**

೧. ಸಣ್ಣ ಕಾಳು (ಅಜಿವಾನ) ಬೆಳ್ಳುಳ್ಳಿಯನ್ನು ಕೊಬ್ಬರಿ ಎಣ್ಣೆಯಲ್ಲಿ ಹಾಕಿ ಕುದಿಸಿ ತಣ್ಣಗಾದ ಮೇಲೆ ಕಿವಿಯಲ್ಲಿ ಹಾಕುವುದು.

೨. ಉಳ್ಳಾಗಡ್ಡಿ ರಸವನ್ನು ನೋವಾದ ಕಿವಿಗೆ ಹಾಕಿದರೆ ಕಡಿಮೆಯಾಗುತ್ತದೆ.

೩. ಒಳ್ಳೆಣ್ಣೆ-ಬೆಳ್ಳುಳ್ಳಿ ಕಾಸಿ ಉಗುರು ಬೆಚ್ಚಗಿದ್ದಾಗ ಕಿವಿಗೆ ಹಾಕುವುದು.

೪. ವೋಳಿಸೊಪ್ಪು ಮತ್ತು ಕೆಂಜೋಳವನ್ನು ಸಣ್ಣಗೆ ಕುಟ್ಟಿ ಅದರ ರಸವನ್ನು ಬಲಗಿವಿ ಸೋರಿದರೆ ಎಡಗಿವಿಗೂ, ಎಡಗಿವಿ ಸೋರಿದರೆ ಬಲಗಿವಿಗೂ ಹಾಕುತ್ತಾರೆ/ ಮೂಗಿಗೂ ಹಾಕುತ್ತಾರೆ.

೫. ಬೆಳ್ಳುಳ್ಳಿ ರಸಕ್ಕೆ ಸ್ವಲ್ಪ ಸೈಂದ್ರವ ಲವಣ ಸೇರಿಸಿ ಕರಗಿಸಿ ನೋವಿರುವ ಕಿವಿಗೆ ಒಂದೆರಡು ತೊಟ್ಟು ಹಾಕುವುದರಿಂದ ನೋವು ಕಡಿಮೆಯಾಗುತ್ತದೆ.

೬. ಮೂಲಂಗಿಯನ್ನು ಬೆಂಕಿಯಲ್ಲಿ ಸುಟ್ಟು ಜಜ್ಜಿ ರಸಹಿಂಡಿಕೊಂಡು ಪ್ರತಿದಿನ ಒಂದೆರಡು ತೊಟ್ಟು ಕಿವಿಗೆ ಹಾಕುವುದರಿಂದ ಕಿವಿಯಿಂದ ಸೋರುವುದು ನಿಲ್ಲುತ್ತದೆ.

೭. ಕಿವಿಯಲ್ಲಿ ಸಣ್ಣ ಕ್ರಿಮಿಗಳು ಸೇರಿದಾಗ ಅಡುಗೆಯ ಉಪ್ಪನ್ನು ಸ್ವಲ್ಪ ನೀರಿಗೆ ಬೆರೆಸಿ ೧-೨ ಹನಿ ಕಿವಿಯೊಳಗೆ ಹಾಕಿದರೆ ಕ್ರಿಮಿಗಳು ಸಾಯುತ್ತವೆ.

೮. ಕಿವಿಯೊಳಗೆ ಹುಣ್ಣಾದಾಗ ಮತ್ತು ಸೋರುತ್ತಿರುವಾಗ ತುಳಸಿ ಎಲೆಯ ರಸವನ್ನು ಕಿವಿಯೊಳಗೆ ಹಿಂಡಿದರೆ ನೋವು ಕಡಿಮೆಯಾಗುತ್ತದೆ.

೯. ಒಂದು ಚಮಚ ಬೇವಿನ ಸೊಪ್ಪಿನ ರಸಕ್ಕೆ ಒಂದು ಚಿಟಿಗೆಯಷ್ಟು ಉಪ್ಪಿನ ಪುಡಿ ಸೇರಿಸಿ ಕಿವಿಗೆ ಬಿಡುವುದರಿಂದ ಕ್ರಿಮಿಗಳು ಸತ್ತು ಕಿವಿನೋವು ಕಡಿಮೆಯಾಗುತ್ತದೆ.

**ಮೂಗಿನಿಂದ ರಕ್ತಸೋರುವುದಕ್ಕೆ**

೧. ಆಗತಾನೇ ಕತ್ತರಿಸಿದ ಈರುಳ್ಳಿಯನ್ನು ಮೂಸಿ ನೋಡಿದರೆ ರಕ್ತ ಸುರಿಯುವುದು ಕಡಿಮೆಯಾಗುತ್ತದೆ.

೨. ಶುಂಠಿಯ ರಸದೊಡನೆ ಜೇನುತುಪ್ಪ ಸೇರಿಸಿ ಕೆಲವು ದಿವಸಗಳವರೆಗೆ ಕುಡಿಯುವುದರಿಂದ ಪದೇ ಪದೇ ನೋವು, ರಕ್ತ ಮೂಗಿನಿಂದ ಸುರಿಯುವುದು ನಿಲ್ಲುತ್ತದೆ.

೩. ಬೇವಿನ ಎಲೆಯ ರಸವನ್ನು ಮೂಗಿನಲ್ಲಿ ೧-೨ ಹನಿ ಹಾಕುವುದರಿಂದ ಮೂಗಿನಲ್ಲಿ ರಕ್ತಸ್ರಾವ ಕಡಿಮೆಯಾಗುವುದು.

೪. ಒಂದೆರಡು ಹನಿ ನಿಂಬೆರಸವನ್ನು ಮೂಗಿನೊಳಗೆ ಹಾಕುವುದರಿಂದ ಮೂಗಿನಲ್ಲಿ ರಕ್ತಸ್ರಾವ ಕಡಿಮೆಯಾಗುತ್ತದೆ.

**ಚರ್ಮರೋಗ (ಅಲರ್ಜಿ)**

೧. ತುಪ್ಪ, ಮೆಣಸು ತಿನ್ನುವುದರಿಂದ ಅಲರ್ಜಿ ಕಡಿಮೆಯಾಗುತ್ತದೆ.

೨. ಉಳ್ಳಿಯ ಕಾಳನ್ನು ತಿನ್ನಲು ಬಳಸುವುದರಿಂದಲೂ ಅಲರ್ಜಿ ಕಡಿಮೆಯಗುತ್ತದೆ.

೩. ಎಳ್ಳೆಣ್ಣೆ ಅಷ್ಟೇ ಪ್ರಮಾಣದಷ್ಟು ಹಾಲು ಸೇರಿಸಿ ಚೆನ್ನಾಗಿ ಬೆರೆಸಿ ಮೈ ಕೈ ತಿಕ್ಕುವುದರಿಂದ ಅಲರ್ಜಿಯಿಂದ ಉಂಟಾದ ಉರಿ ಮತ್ತು ಗಂಧೆ ಕಡಿಮೆಯಾಗುವುದು.

೪. ಕರಿಮೆಣಸು ಮತ್ತು ತುಪ್ಪವನ್ನು ಅಂಗೈನಲ್ಲಿ ಹಾಕಿಕೊಂಡು ನೆಕ್ಕುವುದರಿಂದ ಅಲರ್ಜಿ ಕಡಿಮೆಯಾಗುವುದು.

೫. ಕಂಬಳಿಯನ್ನು ಹೊದೆಯಲು ಬಳಸುವುದರಿಂದಲೂ ಅಲರ್ಜಿಯಿಂದ ಆದ ಗಾದ್ರೆಗಳನ್ನು ನಿವಾರಿಸಬಹುದು.

**ಜಂತುಹುಳು ನಿವಾರಣೆಗೆ**

೧. ಒಂದು ಚಮಚ ನಿಂಬೆರಸಕ್ಕೆ ಒಂದು ಚಿಟಿಗೆ ಹುರಿದ ಹಿಂಗಿನಪುಡಿ ಸೇರಿಸಿ ಒಂದು ವಾರ ಸೇವಿಸಿದ ನಂತರ ವಯೋಮಾನಕ್ಕೆ ತಕ್ಕಂತೆ ೨-೪ ಚಮಚ ಹರಳೆಣ್ಣೆ ಕುಡಿಸುವುದರಿಂದ ಭೇದಿಯಾಗಿ ಹುಳುಗಳು ಮಲದೊಡನೆ ಬೀಳುತ್ತವೆ.

೨. ಪಪ್ಪಾಯಿ ಹಣ್ಣಿನ ಬೀಜಗಳನ್ನು ಒಣಗಿಸಿ ನಂತರ ಪುಡಿಮಾಡಿ, ಪ್ರತಿದಿನ ಬೆಳಿಗ್ಗೆ ಬಿಸಿ ನೀರಿನೊಡನೆ ಒಂದು ವಾರ ಕುಡಿಯಬೇಕು. ಒಂದು ವಾರದ ನಂತರ ೨-೪ ಚಮಚ ಹರಳೆಣ್ಣೆ ಕುಡಿಸಿ ಭೇದಿ ಮಾಡಿಸುವುದರಿಂದ ಜಂತು ಹುಳುಗಳು ಬೀಳುತ್ತವೆ.

**ಇಸುಬಿಗೆ**

೧. ಹೊಂಗೆ ಎಣ್ಣೆಗೆ ಸಮಪ್ರಮಾಣದಲ್ಲಿ ನಿಂಬೆರಸ ಸೇರಿಸಿ ಇಸಬಿನ ಗಾಯದ ಮೇಲೆ ಹಚ್ಚಬೇಕು.

೨. ಮುತ್ತುಗದ ಎಲೆಯನ್ನು ಸುಟ್ಟು ಅದರ ಬೂದಿಗೆ ಎಳ್ಳೆಣ್ಣೆ ಸೇರಿಸಿ ಚೆನ್ನಾಗಿ ಕಲಿಸಿ ಇಸುಬಿನ ಗಾಯದ ಮೇಲೆ ಹಚ್ಚಬೇಕು.

೩. ಬೇವಿನ ತೊಗಟೆ ಸುಟ್ಟು ಬೂದಿಯನ್ನು ಕೀವು ಸೋರುತ್ತಿರುವ ಇಸುಬಿನ ಗಾಯದ ಮೇಲೆ ಹಚ್ಚುವುದರಿಂದ ಗಾಯಕ್ಕೆ ಹುಳುಗಳು ಬೀಳುವುದಿಲ್ಲ.

**ಕಜ್ಜಿ**

೧. ಕೆಂಪು ಮಡಿಕೆಯ ಚೂರು, ಮಂಗಳೂರು ಹೆಂಚನ್ನು ತೇಯ್ದು ಕಜ್ಜಿಯ ಮೇಲೆ ಹಚ್ಚಿದರೆ ವಾಸಿಯಾಗುತ್ತದೆ.

೨. ಗಂಧ ತೇಯ್ದು ಕಜ್ಜಿಯ ಮೇಲೆ ಹಚ್ಚಿದರೆ ವಾಸಿಯಾಗುತ್ತದೆ.

೩. ಕೊಬ್ಬರಿ ಎಣ್ಣೆ ಹಚ್ಚಿ ಹೊತ್ತು ಬಿಟ್ಟು ಸೀಗೆಪುಡಿಯಲ್ಲಿ ಸ್ನಾನ ಮಾಡಬೇಕು.

**ಕಣ್ಣು ಬೇನೆ**

ಬಾಣಂತಿಯರಿದ್ದರೆ ತಾಯಿಯ ಎದೆಹಾಲನ್ನು ಕಣ್ಣಿಗೆ ಬಿಡಬೇಕು. ಇದರಿಂದ ಕಣ್ಣುಬೇನೆ ಹೋಗುತ್ತದೆ.

**ಹೊಟ್ಟೆನೋವಿಗೆ**

೧. ತುಳಸಿಯ ರಸವನ್ನು ಸಮಭಾಗದ ಹಸಿ ಶುಂಠಿಯ ರಸದೊಡನೆ ಸ್ವಲ್ಪ ಬಿಸಿಮಾಡಿ ಕುಡಿಯುವುದರಿಂದ ಹೊಟ್ಟೆ ನೋವು ನಿವಾರಣೆಯಾಗುತ್ತದೆ.

೨. ಎಕ್ಕದ ಹಣ್ಣೆಲೆಗಳನ್ನು ಇದ್ದಲಿನ ಕೆಂಡದಲ್ಲಿ ಸುಟ್ಟು ಬೂದಿ ಮಾಡಿಟ್ಟುಕೊಂಡು ಹೊಟ್ಟೆ ನೋವಾದಾಗ ಬೂದಿಯನ್ನು ಜೇನುತುಪ್ಪದೊಡನೆ ಸೇವಿಸಿದರೆ ಹೊಟ್ಟೆ ನೋವು ಕಡಿಮೆಯಾಗುತ್ತದೆ.

೩. ಕೇರುಬೀಜ, ಒಣಕೊಬ್ಬರಿಯನ್ನು ಕುಟ್ಟಿ ಪುಡಿಮಾಡಿ ನೀರಿನಲ್ಲಿ ಕುಡಿಯಲು ಕೊಡುವುದರಿಂದ ಹೊಟ್ಟೆನೋವು ಕಡಿಮೆಯಾಗುತ್ತದೆ.

೪. ಸೈಂದವ ಲವಣ, ಹಿಪ್ಪಲಿ, ಶುಂಠಿ, ಮೆಣಸು ಇವುಗಳನ್ನು ಅರೆದು ಮಜ್ಜಿಗೆಯಲ್ಲಿ ಸೇರಿಸಿ ಕುಡಿಯುವುದರಿಂದ ಹೊಟ್ಟೆ ನೋವು ಪೂರ್ಣವಾಗಿ ಕಡಿಮೆಯಾಗುತ್ತದೆ.

**ಎದೆನೋವು**

೧. ಮೆಂತೆಸೊಪ್ಪಿನ ರಸವನ್ನು (ಮೆಂತೆ ಕಷಾಯ) ಜೇನುತುಪ್ಪದಲ್ಲಿ ದಿನಕ್ಕೆರಡು ಬಾರಿ ಸೇವಿಸಿದರೆ ಎದೆನೋವು ಕಡಿಮೆಯಾಗುತ್ತದೆ.

೨. ನೋವುಗಳಿಗೆ ನುಗ್ಗೆಚಕ್ಕೆ, ಬೆಳ್ಳುಳ್ಳಿ, ಶುಂಠಿ, ಬಜೆ ಸಮಾನವಾಗಿರುವಂತೆ ಕಷಾಯ ತಯಾರಿಸಿ ದಿನಕ್ಕೆ ಎರಡು ಬಾರಿ ಸ್ವಲ್ಪ ಸ್ವಲ್ಪ ಪ್ರಮಾಣ ಸೇವಿಸಿದರೆ ನೋವು ಕಡಿಮೆಯಾಗುತ್ತದೆ.

**ಕೆಮ್ಮು**

೧. ೩ ಚಮಚ ಮೆಣಸು ಉರಿದು ನೀರು ಬೆರೆಸಿ, ಕಾಯಿಸಿ ರಸ ತಯಾರಿಸಿ ಮಕ್ಕಳಿಗೆ ಕುಡಿಸಿದರೆ ಕೆಮ್ಮು ತಕ್ಷಣವೇ ಕಡಿಮೆಯಾಗುತ್ತದೆ.

೨. (ಹಿಪ್ಪಲಿರಸ): ಹಿಪ್ಪಲಿ, ಶುಂಠಿ, ಮೆಂತ್ಯ, ಸಮತೂಕದೊಂದಿಗೆ ಅರೆದು ನೀರಿನೊಂದಿಗೆ ಕಾಸಿ ಸ್ವಲ್ಪ ಸ್ವಲ್ಪ ದಿನಕ್ಕೆರಡು ಬಾರಿ ಸೇವಿಸಿದರೆ ಕೆಮ್ಮು ವಾಸಿಯಾಗುತ್ತದೆ.

೩. (ಖರ್ಜೂರ ರಸ): ಖರ್ಜೂರಕಾಯಿ, ಅತಿಮಧುರ, ಶುಂಠಿ ಸಮತೂಕ ಸೇರಿಸಿ ನೀರು ಹಾಕಿ ಕಾಯಿಸಿ ರಸವನ್ನು ದಿನಕ್ಕೆರಡು ಬಾರಿ ಹಾಲು ಇಲ್ಲವೇ ಕಲ್ಲುಸಕ್ಕರೆಯೊಂದಿಗೆ ಸೇವಿಸಿದರೆ ಕೆಮ್ಮು ಕಡಿಮೆಯಾಗುತ್ತದೆ.

**ಮೂತ್ರರೋಗ**

**ತಾವರಗಡ್ಡೆ, ದಳಕಷಾಯ**

ತಾವರಗಡ್ಡೆ ದಳಗಳನ್ನು ಕಬ್ಬು ಬೇರು, ಭತ್ತದ ಬೇರು, ದರ್ಜೆ ಮುಂತಾದವನ್ನು ಸಮಪ್ರಮಾಣ ದಲ್ಲಿ ನೀರಿನಲ್ಲಿ ಕುದಿಸಿ, ರಸವನ್ನು ದಿನಕ್ಕೆರಡು ಬಾರಿ ಸೇವಿಸಿದರೆ ಮೂತ್ರರೋಗ ವಾಸಿಯಾಗು ತ್ತದೆ.

**ಪಿತ್ತರೋಗ**

೧. **ಏಲಕ್ಕಿ ಕಷಾಯ:** ಏಲಕ್ಕಿ, ಮೆಣಸು, ಹಿಪ್ಪಲಿ ಜೀರಿಗೆ, ಅತಿಮಧುರ, ಶುಂಠಿ, ಗಂಧದ ಪುಡಿ ಸಮತೂಕದೊಂದಿಗೆ ನೀರಿನೊಂದಿಗೆ ಕಾಯಿಸಿ ರಸವನ್ನು ದಿನಕ್ಕೆರಡು ಬಾರಿ ಸೇವಿಸಿದರೆ ಪಿತ್ತರೋಗ ಕಡಿಮೆಯಾಗುತ್ತದೆ.

೨. **ಶುಠಿ ಕಷಾಯ:** ಶುಂಠಿ, ದನಿಯಾ ಸಮತೂಕದಲ್ಲಿ ಪುಡಿ ಮಾಡಿ ಕುದಿಸಿ ರಸವನ್ನು ಸೇವಿಸಿದರೆ ಕಾಫಿ, ಟೀನಲ್ಲಿ ಸೇವಿಸುವುದರಿಂದ ಪಿತ್ತ ವಾಸಿಯಾಗುತ್ತದೆ.

೩. **ಬೇವಿನಚಕ್ಕೆ ರಸ:** ಬೇವಿನಚಕ್ಕೆ, ನೆಲಬೇವು, ಪಡವಲ, ಅಮೃತಬಳ್ಳಿ ಸಮತೂಕದಲ್ಲಿ ನೀರಿನೊಂದಿಗೆ ಕಾಯಿಸಿ ರಸವನ್ನು ಸೇವಿಸಿದರೆ ಪಿತ್ತ ವಾಸಿಯಾಗುತ್ತದೆ.

**ಭೇದಿ**

ದಾಳಿಂಬೆ ಬೇರು, ಚಕ್ಕೆ, ಅಶೋಕ ಮರದ ಚಕ್ಕೆ, ಸಮತೂಕದಲ್ಲಿ ಅರೆದು, ನೀರಿನೊಂದಿಗೆ ಕುದಿಸಿ ರಸವನ್ನು ದಿನಕ್ಕೆ ಮೂರು ಬಾರಿ ಸೇವಿಸಿದರೆ ಭೇದಿ ಕಡಿಮೆಯಾಗುತ್ತದೆ.

**ರಕ್ತವೃದ್ಧಿಗೆ**

ನುಗ್ಗೆ ಹೂ, ಕಾನಂಬಳಿ ಎಲೆ, ಉರಿದು ನೀರಿನೊಂದಿಗೆ ಕಾಯಿಸಿ, ಕಷಾಯವನ್ನು ಹಾಲಿನೊಂದಿಗೆ ಕಲ್ಲು ಸಕ್ಕರೆಯಲ್ಲಿ ಸೇವಿಸಿದರೆ ರಕ್ತವು ವೃದ್ಧಿಯಾಗುತ್ತದೆ.

**ನೆಗಡಿ**

೧. ಒದು ಕಪ್ ಕುದಿಯುವ ನೀರಿಗೆ ೧ ಚಮಚ ಅರಿಶಿಣ ಪುಡಿಯನ್ನು ಹಾಕಿ, ಸ್ವಲ್ಪ ಸಮಯದ ನಂತರ ಸಕ್ಕರೆ ಸೇರಿಸಿ ದಿನಕ್ಕೆರಡು ಬಾರಿ ಈ ರೀತಿ ಕುಡಿದರೆ ನೆಗಡಿ ಕಡಿಮೆಯಾಗುತ್ತದೆ.

೨. ಆಲೂಗಡ್ಡೆ ಸೊಪ್ಪು, ನೆಲಗುಳ್ಳ ಬೇರು, ರಸಗಡ್ಡೆ ಮೂರನ್ನು ಸೇರಿಸಿ, ನೀರಿನೊಂದಿಗೆ ಕಾಸಿ ಸಕ್ಕರೆ ಸೇರಿಸಿ ದಿನಕ್ಕೆರಡು ಬಾರಿ ಕುಡಿದರೆ ನೆಗಡಿಯು ಪೂರ್ಣವಾಗಿ ಕಡಿಮೆಯಾಗುತ್ತದೆ.

## ಮಧುಮೇಹ ರೋಗ

೧. **ಲವಂಗ ಚಕ್ಕೆ ಕಷಾಯ:** ಲವಂಗ ಚಕ್ಕೆ, ದೇವದಾರು, ಗಂಧ, ಏಲಕ್ಕಿ, ಲವಂಗ, ನಿಂಬೆಬೇರು, ಖರ್ಜೂರ, ಅರಿಶಿಣ ಸಮಪ್ರಮಾಣದಲ್ಲಿ ನೀರಿನೊಂದಿಗೆ ಕಾಯಿಸಿ ಕಷಾಯ ಮಾಡಿ ದಿನಕ್ಕೆ ೪ ಬಾರಿ ಸ್ವಲ್ಪ ಸ್ವಲ್ಪ ಸೇವಿಸಿದರೆ ಮಧುಮೇಹರೋಗ ಕಡಿಮಯಾಗುತ್ತದೆ.

೨. **ಅಂತರಗಂಗೆ:** ಅಂತರಗಂಗೆ, ಗರಿಕೆಹುಲ್ಲು, ಟಂಗಹುಲ್ಲು, ಕಲ್ಲು ಹೂ, ಸಮಪ್ರಮಾಣದಲ್ಲಿ ಕಷಾಯ ತಯಾರಿಸಿ ದಿನಕ್ಕೆರಡು ಬಾರಿ ಸೇವಿಸಿದರೆ ಮಧುಮೇಹ ರೋಗ ಕಡಿಮೆಯಾಗುತ್ತದೆ.

## ಶ್ವಾಸಕೋಶ ತೊಂದರೆ

೧. ನೆಲಗುಳ್ಳ ಎಲೆ, ಬೇರು, ಕಾಂಡ ಮೂರನ್ನು ಸೇರಿಸಿ ಕಷಾಯ ಮಾಡಿ, ದಿನಕ್ಕೆ ಎರಡು ಬಾರಿ ಜೇನುತುಪ್ಪದಲ್ಲಿ ಸೇವಿಸಿದರೆ ಶ್ವಾಸಕೋಶದ ತೊಂದರೆ ತೊಂದರೆ ಕಡಿಮೆಯಾಗುತ್ತದೆ.

೨. ದ್ರಾಕ್ಷಿಬೀಜ, ಅಳಲೆಕಾಯಿ, ಅಡುಸೋಗೆ ಎಲೆ, ಸಮಪ್ರಮಾಣದಲ್ಲಿ ಕಷಾಯಮಾಡಿ ಜೇನುತುಪ್ಪದಲ್ಲಿ ದಿನಕ್ಕೆರಡು ಬಾರಿ ಸೇವಿಸಿದರೆ ಶ್ವಾಶಕೋಶ ತೊಂದರೆ ವಾಸಿಯಾಗುತ್ತದೆ.



## ಕಾಲರಾ

ಬಿಲ್ವಬೇರು, ಏಲಕ್ಕಿ, ಹೆಸರು ಬೇಳೆ, ಮೆಣಸು, ಮಂಡಕ್ಕಿ ಸಮತೂಕ ಸೇರಿಸಿ ಪುಡಿಮಾಡಿ ಕಷಾಯ ತಯಾರಿಸಿ ಸ್ವಲ್ಪ ಸ್ವಲ್ಪ ದಿನಕ್ಕೆರಡುಬಾರಿ ೨೧ ದಿನ ಸೇವಿಸಿದರೆ ಕಾಲರಾ ವಾಸಿಯಾಗುತ್ತದೆ.

## ಮೂರ್ಛೆರೋಗ

ಕಸ್ತೂರಿ, ಎರೆಹುಳುವನ್ನು ಸೇರಿಸಿ ಕುಟ್ಟಿ ಅದರ ರಸವನ್ನು ತೆಗೆದು ಈ ರಸವನ್ನು ಮೂಗಿನಲ್ಲಿ ಬಿಡಬೇಕು. ಹೀಗೆ ದಿನಕ್ಕೆ ೩ ಬಾರಿಯಂತೆ ಒಂದು ವಾರ ಹಾಕುವುದರಿಂದ ಮೂರ್ಛೆರೋಗ ವಾಸಿಯಾಗುತ್ತದೆ.

## ಲಕ್ವಾ (ಪಾರ್ಶ್ವ)

೧. ಸಾಂಬರ ಪಕ್ಷಿಯ ರಕ್ತದಲ್ಲಿ, ಪಕ್ಷಿಯ ಡೊಮ್ಮೆ (ಲಿವರ್)ಯನ್ನು ನೆನಸಿ, ಸಣ್ಣಗೆ ಕುಟ್ಟಿ ತಿನ್ನಿಸಬೇಕು. ದಿನಕ್ಕೆ ೩ ರಿಂದ ೫ ಬಾರಿಯಂತೆ ಕೊಡಬೇಕು. ಹೀಗೆ ೩ ದಿನಗಳವರೆಗೆ ಕೊಟ್ಟರೆ ಪಾರ್ಶ್ವಯು ವಾಸಿಯಾಗುತ್ತದೆ.

೨. ಅಡವಿಪಾರಿವಾಳದ ರಕ್ತವನ್ನು ದಿನಕ್ಕೆ ೨ ಬಾರಿಯಂತೆ ತಿಂಗಳಲ್ಲಿ ೩-೪ಬಾರಿ ಕುಡಿಸಿದರೆ ಪಾರ್ಶ್ವಯು ಕಡಿಮೆಯಾಗುತ್ತದೆ.

## ಗಾಯಕ್ಕೆ

ಅರಳಿ ಮರದ ಚಕ್ಕೆಯನ್ನು ಕುಟ್ಟಿ, ಬಟ್ಟೆಯಲ್ಲಿ ಅದರ ಪುಡಿಯನ್ನು ಶೋಧಿಸಿ, ಧೂಳು ಮಾಡಿಕೊಂಡು ಹಸಿಗಾಯಕ್ಕೆ (ರಕ್ತ ಸುರಿಯುವುದಕ್ಕೆ) ಹಾಕಿಕೊಂಡರೆ. ರಕ್ತ ಸೋರುವುದನ್ನು ನಿಲ್ಲಿಸುತ್ತದೆ. ಮತ್ತು ಗಾಯ ವಾಸಿಯಾಗುತ್ತದೆ.

ಹಸಿಗಾಯಕ್ಕೆ ಬೇಲಿಸೊಪ್ಪು, ಉಪ್ಪು, ಅರಿಶಿನಪುಡಿಯನ್ನು ಕಲಸಿ ಚೆನ್ನಾಗಿ ಕುಟ್ಟಿ ರಸವನ್ನು ತೆಗೆದು ಗಾಯಕ್ಕೆ ಬಿಟ್ಟರೆ ರಕ್ತ ನಿಲ್ಲುತ್ತದೆ. ಹಾಗೂ ಗಾಯನೂ ವಾಸಿಯಾಗುತ್ತದೆ.

**ರಕ್ತದ ಚಲನೆಗೆ**

ಗರಿಕೆ ಹುಲ್ಲನ್ನು ಚೆನ್ನಾಗಿ ಕುಟ್ಟಿ ಪೇಸ್ಟ್ ತರ ಮಾಡಿ ಬೆಳಗ್ಗೆನೇ ತಣ್ಣನೆ ನೀರಿನಲ್ಲಿ ಹಾಕಿ ಪ್ರತಿದಿನ ಕುಡಿಯುತ್ತಾ ಹೋದರೆ ರಕ್ತದ ಚಲನೆ ಚೆನ್ನಾಗಿರುತ್ತದೆ.

**ನಿಶ್ಯಕ್ತಿ ಇದ್ದರೆ**

೧. ಹಿರೇಮದ್ದಿನ ಬೇರುಗಳನ್ನು ಪುಡಿಮಾಡಿಟ್ಟುಕೊಂಡು ಜೇನುತುಪ್ಪದೊಂದಿಗೆ ದಿನಕ್ಕೆ ಮೂರು ಚಮಚದಂತೆ ಸೇವಿಸಬೇಕು. ಈ ಚಿಕಿತ್ಸೆಯನ್ನು ನಿರಂತರವಾಗಿ ಮೂರು ತಿಂಗಳು ಮುಂದುವರಿಸಬೇಕು. ಹೀಗೆ ಮಾಡುವುದರಿಂದ ನಿಶ್ಯಕ್ತಿಯು ವಾಸಿಯಾಗುತ್ತದೆ.

೨. ತುಂಗೆಯ ಗಡ್ಡೆಗಳನ್ನು ಚೆನ್ನಾಗಿ ಒಣಗಿಸಿ ಶುದ್ಧಗೊಳಿಸಿ ಪುಡಿಮಾಡಿ ನಾಲ್ಕು ಚಮಚದಂತೆ ಸಕ್ಕರೆಯೊಂದಿಗೆ ಮೂರು ತಿಂಗಳು ಸೇವಿಸುವುದರಿಂದ ನಿಶ್ಯಕ್ತಿ ವಾಸಿಯಾಗುತ್ತದೆ.

೩. ಒಂದೆಲಗ ಸಸ್ಯದ ಸಮೂಲವನ್ನು ಚೆನ್ನಾಗಿ ತೊಳೆದು ಪಲ್ಯದಂತೆ ಮೂರು ತಿಂಗಳು ಮಾಡಿಕೊಂಡು ಸೇವಿಸುವುದರಿಂದ ನಿಶ್ಯಕ್ತಿ ವಾಸಿಯಾಗುತ್ತದೆ.

**ಕಣ್ಣುಗಳ ತೊಂದರೆಗೆ**

ಹರಳೆಣ್ಣೆಯಲ್ಲಿ ಹತ್ತಿಯನ್ನು ನೆನಸಿ ಅಥವಾ ತಾಯಿಯ ಎದೆ ಹಾಲಲ್ಲಿ ನೆನಸಿ ಕಣ್ಣುಗಳಿಗೆ ಹಿಟ್ಟುಕೊಂಡರೆ ಕಣ್ಣಿನ ತೊಂದರೆ ವಾಸಿಯಾಗುತ್ತದೆ.

**ನುಸಿಕೆಮ್ಮು**

ಗಂಧಿಗೆ ಸೊಪ್ಪು ಮತ್ತು ಬೆಲ್ಲ, ಏಲಕ್ಕಿಯನ್ನು ಸೇರಿಸಿ ಹೆಚ್ಚು ಏಲಕ್ಕಿಯನ್ನು ಹಾಕಿ ಚೆನ್ನಾಗಿ ಕುಟ್ಟಿ ಗುಳಿಗೆತರ ಮಾಡಿ ಬೆಳಗ್ಗೆ ಹಾಳು ಹೊಟ್ಟೆಗೆ ಈ ಗುಳಿಗೆಯನ್ನು ನುಂಗಬೇಕು ಹೀಗೆ ಮೂರು ದಿನಗಳು ತೆಗೆದುಕೊಳ್ಳುವುದರಿಂದ ನುಸಿ ಕೆಮ್ಮು ವಾಸಿಯಾಗುತ್ತದೆ.

**ಕಿವಿನೋವು**

ಕಾಮಂಜು ಹುಳು (ಮನೆಯಲ್ಲಿ ಗೂಡು ಕಟ್ಟಿಕೊಳ್ಳುತ್ತಿದೆ) ಇದನ್ನು ಹರಳೆಣ್ಣೆ, ಉಪ್ಪು ಇವಿಷ್ಟನ್ನು ಒಂದು ಸೌಟಿನಲ್ಲಿ ಹಾಕಿ ಚೆನ್ನಾಗಿ ಕುದಿಸಿ ಅನಂತರ ಕೆಳಗಿಳಿಸಿ ಆರಿದ ನಂತರ ಕಿವಿಯೊಳಗೆ ಮೂರುನಾಲ್ಕು ಹನಿಯನ್ನು ಹಾಕಿಕೊಳ್ಳಬೇಕು. ಇದರಿಂದ ಕಿವಿನೋವು ಕಡಿಮೆಯಾಗುತ್ತದೆ.

**ಕಾಲಲ್ಲಿ ಮುಳ್ಳು ಇದ್ದಾಗ**

ಮೊದಲು ಎಕ್ಕದ ಹಾಲನ್ನು ಗಾಯಕ್ಕೆ ಸವರಬೇಕು. ಅನಂತರ ಮೆಣಸು, ಬೆಳ್ಳುಳ್ಳಿ, ಹಸಿರು ಸೊಪ್ಪುಗಳನ್ನು ನುಣ್ಣಗೆ ಅರೆದು ನೀರಿನಲ್ಲಿ ಚೆನ್ನಾಗಿ ಕೊತ ಕೊತ ಕುದಿಸಿದ ನಂತರ ಇಳಿಸಬೇಕು. ಆರಿದ ಮೇಲೆ ಅದನ್ನು ಒಂದು ಶುದ್ಧವಾದ ಬಟ್ಟೆಗೆ ಹಾಕಿ ಗಾಯದ ಮೇಲೆ ಕಟ್ಟಬೇಕು. ಆಗ ಎರಡು ಮೂರು ದಿನಗಳೊಳಗೆ ಮುಳ್ಳು ತಾನಾಗಿಯೇ ಹೊರಗೆ ಬರುತ್ತದೆ.

**ವಾಂತಿ, ಬೇದಿಯಾದಾಗ**

ಟೊಮೊಟೋ ಸೊಪ್ಪು, ಜೀರಿಗೆ ಎರಡನ್ನು ಕಲ್ಲಿನ ಮೇಲೆ ಅರೆದು ಹಸುವಿನ ಹಾಲಿನೊಂದಿಗೆ ಸೇರಿಸಿ ಕುಡಿಯುವುದರಿಂದ ವಾಂತಿ, ಬೇದಿಯು ಕಡಿಮೆಯಾಗುತ್ತದೆ.

**ನೆಗಡಿಯಾಗಿ ತಲೆಬಾರವಾದರೆ**

ಕಾರೆಕಾಯಿಯನ್ನು ಚೆನ್ನಾಗಿ ತೇದಿ ನೀರಿನಲ್ಲಿ ಕಲಸಿ ಅದನ್ನು ತಲೆ ಬಾರವಾದ ಜಾಗಕ್ಕೆ ಸವರಿಕೊಳ್ಳಬೇಕು. ಇದರಿಂದ ತಲೆಬಾರ ಕಡಿಮೆಯಾಗುತ್ತದೆ.

ಜೀರಿಗೆ ಅರ್ಧ ಚಮಚ, ಮೆಣಸು ಮುಕ್ಕಾಲು ಚಮಚ, ಉಪ್ಪು, ತುಳಸಿ ಎಲೆ ಇದನ್ನು ಚೆನ್ನಾಗಿ ಬೇಯಿಸಿ ಅದನ್ನು ಚೆನ್ನಾಗಿ ಮಿಶ್ರಮಾಡಿ ರಸವನ್ನು ತೆಗೆದು ಕುಡಿದರೆ ನೆಗಡಿ ಕೆಮ್ಮು ವಾಸಿಯಾಗುತ್ತದೆ.

**ಕಫ ಆದರೆ**

ಸೂತಖಾರ ಒಂದು ಚಿಟಕಿ ಲವಂಗ ೪-೫, ಮೆಣಸು ಮುಕ್ಕಾಲು ಚಮಚ, ಬೊಳ್ಳೊಳ್ಳಿ, ೧ಗಡ್ಡೆ, ಬಜೆ, ಜಾಜಿಕಾಯಿ ಇವಿಷ್ಟನ್ನು ಚೆನ್ನಾಗಿ ಕುಟ್ಟಿ ಅದರ ಪುಡಿಯನ್ನು ಎದೆ ಹಾಲಿನಲ್ಲಿ ಕುಡಿಯುವುದರಿಂದ ಕಫ ಕಡಿಮೆಯಾಗುತ್ತದೆ.

**ವಾಂತಿ ಆದರೆ**

ಹುಣಸೆ ಹಣ್ಣು, ಪುದೀನಾ ಎಲೆ, ಮೆಣಸು, ಏಲಕ್ಕಿ, ಉಪ್ಪನ್ನು ಸೇರಿಸಿ ನುಣ್ಣಗೆ ಅರೆದು ನೀರಿನಲ್ಲಿ ಕುಡಿಯುವುದರಿಂದ ವಾಂತಿ ನಿಲ್ಲುತ್ತದೆ.

**ಹಿಮ್ಮಡಿ ಒಡೆದರೆ**

೧. ಮೇಣದ ಬತ್ತಿ ಮೂರುಭಾಗ, ಕೊಬರಿ ಎಣ್ಣೆ ಒಂದು ಭಾಗ, ಹತ್ತು ಹದಿನೈದು ಬಿಲ್ಲೆ ಕರ್ಪೂರ ಇವುಗಳನ್ನು ಅಲ್ಯೂಮಿನಿಯಂ ಬಟ್ಟಲಲ್ಲಿ ಹಾಕಿ ನೀರಾಗುವಂತೆ ಬಿಸಿ ಮಾಡಿ ಒಂದು ಸೀಸೆಯಲ್ಲಿ ತುಂಬಿಟ್ಟುಕೊಳ್ಳಬೇಕು. ರಾತ್ರಿ ಕಾಲನ್ನು ಚೆನ್ನಾಗಿ ತೊಳೆದು, ಒಣಗಿಸಿ ಬಿರುಕುಬಿಟ್ಟ ಜಾಗಕ್ಕೆ ಹಚ್ಚಬೇಕು. ಹೀಗೆ ೧೫-೨೦ ದಿನಗಳವರೆಗೆ ಹಚ್ಚಿಕೊಳ್ಳಬೇಕು.

೨. ೫೦ಗ್ರಾಂ ಹರಳೆಣ್ಣೆಯನ್ನು ಚೆನ್ನಾಗಿ ಕಾಯಿಸಿ, ೫೦ಗ್ರಾಂ ಜೇನು ಮೇಣವನ್ನು ಹಾಕಿ ಕಾಯಿಸಬೇಕು. ಮೇಣಕರಗಿದ ನಂತರ ಆರಿಸಿ ಒಂದು ಸೀಸದಲ್ಲಿ ಹಾಕಿಕೊಂಡು ರಾತ್ರಿ ಮಲಗುವ ಮುನ್ನ ಕಾಲಿಗೆ ಹಚ್ಚಿಕೊಳ್ಳಬೇಕು.

**ತಲೆಯಲ್ಲಿ ಹೊಟ್ಟು ಆದರೆ**

ಹುಳಿ ಮಜ್ಜಿಗೆಯಿಂದ ತಲೆಯನ್ನು ಚೆನ್ನಾಗಿ ಮಸಾಜಮಾಡಿ, ಸ್ನಾನ ಮಾಡಬೇಕು. ಹೀಗೆ ಒಂದಿನ ಬಿಟ್ಟು, ಒಂದುದಿನ ಹುಳಿ ಮಜ್ಜಿಗೆಯಿಂದ ತಲೆಯನ್ನು ತೊಳೆದುಕೊಳ್ಳುವುದರಿಂದ ತಲೆಯಲ್ಲಿನ ಹೊಟ್ಟು ವಾಸಿಯಾಗುತ್ತದೆ.

**ನರಕ್ಕೆ ಸಂಬಂಧಿಸಿದ ರೋಗಕ್ಕೆ**

೧. ಒಂದಲಗ ಸೊಪ್ಪನ್ನು ನೆರಳಲ್ಲಿ ಒಣಗಿಸಿಟ್ಟುಕೊಂಡು ಅದನ್ನ ಪುಡಿಮಾಡಿ, ಒಂದು ಲೋಟ ನೀರನ್ನು ಹಾಕಿ ಕುದಿಸಿದರೆ, ಅದು ಅರ್ಧ ಲೋಟ ಆಗುವವರೆಗೆ ಕುದಿಸಬೇಕು. ನಂತರ ಅದಕ್ಕೆ ಹಾಲು ಸಕ್ಕರೆ ಸೇರಿಸಿ, ಬೆಳಗ್ಗೆ ಎದ್ದೊಡನೆ ಕುಡಿಯಬೇಕು.

೨. ಅರ್ಧ ಲೋಟ ಹಾಲು, ಒಂದು ಚಮಚ ಜೇನು ತುಪ್ಪ, ಪಪ್ಪಾಯಿ ಹಣ್ಣಿನ ರಸವನ್ನು ಮಿಶ್ರಣಮಾಡಿ ದಿನಕ್ಕೆರಡು ಸಲ ತಿನ್ನಬೇಕು. ಹೀಗೆ ೩-೪ದಿನ ಸೇವಿಸುವುದರಿಂದ ನರ ಸಂಬಂಧಿ ರೋಗ ವಾಸಿಯಾಗುತ್ತದೆ.

೩. ಸೇಬನ್ನು ಚಿಕ್ಕ ಚಿಕ್ಕ ಹೋಳನ್ನಾಗಿ ಮಾಡಿ, ಜೊತೆಗೆ ಪನ್ನೀರು ಗುಲಾಬಿ ಇವೆರಡನ್ನು ಸ್ವಲ್ಪ ಜೇನಿನ ತುಪ್ಪದಲ್ಲಿ ಹಾಕಿಟ್ಟು ಒಂದು ವಾರ ಬಿಸಿಲಿನಲ್ಲಿಟ್ಟು ಒಣಗಿಸಬೇಕು. ಆ ಮೇಲೆ ಒಂದು ಚಮಚ ಇದನ್ನು ತಿಂದು ಒಂದು ಲೋಟ ಹಾಲನ್ನು ಕುಡಿಯಬೇಕು. ದಿನಕ್ಕೆರಡು ಬಾರಿಯಂತೆ ಒಂದು ತಿಂಗಳು ಇದನ್ನು ತಿನ್ನಬೇಕು.

೪. ಶತಾವರಿ ಬೀಜವನ್ನು ಕೊಬ್ರಣ್ಣೆಯಲ್ಲಿ ಹಾಕಿ ಕಾಯಿಸಿ ಮೈಯಿಗೆ ಹಚ್ಚಿಕೊಳ್ಳಬೇಕು. ಹೀಗೆ ೨-೩ ದಿನಕ್ಕೆ ಒಮ್ಮೆ ಹಚ್ಚಿಕೊಳ್ಳುವುದರಿಂದ ನರದ ದೌರ್ಬಲ್ಯ ಕಡಿಮೆಯಾಗುತ್ತದೆ.

೫. ಬೆಳ್ಳುಳ್ಳಿಯನ್ನು ಜಜ್ಜಿ ಕೊಬ್ರೆಣ್ಣೆಯಲ್ಲಿ ಹಾಕಿ ಕಾಯಿಸಿ ಮೈಯಲ್ಲಾ ಸವರಿಕೊಳ್ಳಬೇಕು. ನರಕ್ಕೆ ಸಂಬಂಧಿಸಿದ ಕಾಯಿಲೆ ವಾಸಿಯಾಗುತ್ತದೆ.

**ಕಿವಿನೋವಿಗೆ**

೧. ಎಳ್ಳೆಣ್ಣೆ, ಸದಪ್ಪ ಸೊಪ್ಪನ್ನು ಬಿಸಿಮಾಡಿ. ಕುಟ್ಟಿ ಅದರ ರಸವನ್ನು ತೆಗೆದು ಕಿವಿಯಲ್ಲಿ ೨ ಹನಿಯಂತೆ ೩ ದಿನ ಹಾಕಿಕೊಳ್ಳುವುದರಿಂದ ಕಿವಿನೋವು ಕಡಿಮೆಯಾಗುತ್ತದೆ.

**ಹಲ್ಲು ನೋವಿಗೆ**

೧. ಕಾಡು ಬದನೆಕಾಯಿ ಬೀಜವನ್ನು ಮಜ್ಜಿಗೆಯಲ್ಲಿ ತೇದಿ ಹಲ್ಲುನೋವಿರುವ ವಿರುದ್ಧ ಭಾಗದ ಕಿವಿಗೆ ಹಚ್ಚುವುದರಿಂದ ಹಲ್ಲು ನೋವು ಕಡಿಮೆಯಾಗುತ್ತದೆ.

೨. ಹೊಂಗೆ ಮರದ ಚಕ್ಕೆಯನ್ನು ಬೇಯಿಸಿ ಎರಡು ಹರಳು ಉಪ್ಪನ್ನು ಮಿಶ್ರಣ ಮಾಡಿ ಕುಟ್ಟಿ ಪುಡಿಮಾಡಿ ಇಟ್ಟುಕೊಂಡು ಮುಂಜಾನೆ ನೀರಿನಲ್ಲಿ ಕಲಸಿ ಬಾಯಿಯಲ್ಲಿ ಹಾಕಿಕೊಂಡು ಮುಕ್ಕಳಿಸುವುದರಿಂದ ಹಲ್ಲು ನೋವು ಕಡಿಮೆಯಾಗುತ್ತದೆ.

೩. ಆಲೆ ಹಣ್ಣಿನ ಬೀಜ ಒಂದು ಹಾಗೂ ಸ್ವಲ್ಪ ಉಪ್ಪನ್ನು ಸೇರಿಸಿ ಚೆನ್ನಾಗಿ ಜಜ್ಜಿ ನೋವಿರುವ ಹಲ್ಲಿಗೆ ಹಚ್ಚಿಕೊಳ್ಳುಬೇಕು. ಹೀಗೆ ದಿನದಲ್ಲಿ ೩ ಹೊತ್ತು ಈ ಔಷಧಿಯನ್ನು ಹಚ್ಚಿಕೊಳ್ಳಬೇಕು.

**ಅರಿಶಿನ ಕಾಮಲೆ**

ಉದುರು ಬಳ್ಳಿ ಸೊಪ್ಪು ೧೦೦ಗ್ರಾಂ, ಕಲ್ಲುಸಕ್ಕರೆ ೫೦ಗ್ರಾಂ. ಜೀರಿಗೆ ೫೦ಗ್ರಾಂ, ಮುಕ್ಕಾಲು ಹಸುವಿನ ಹಾಲು, ಇವಿಷ್ಟನ್ನು ಸೇರಿಸಿ ಚೆನ್ನಾಗಿ ಜಜ್ಜಿ ಅರೆದು ಹಾಲಿನ ಜೊತೆಗೆ ಸೇರಿಸಿ ಕುಡಿಯಬೇಕು. ಹೀಗೆ ದಿನಕ್ಕೆ ೨ ಬಾರಿ (ಬೆಳಗ್ಗೆ-ಸಂಜೆ)ಹಸಿ ಹೊಟ್ಟೆಯಲ್ಲಿ (ಖಾಲಿ ಹೊಟ್ಟೆಯಲ್ಲಿ) ಈ ಔಷಧಿಯನ್ನು ಸೇವಿಸುವುದರಿಂದ ಈ ಕಾಯಿಲೆ ವಾಸಿಯಾಗುತ್ತದೆ.

### ಹಾವು-ಚೇಳು ಕಡಿದರೆ

ಆಲೆಮರದ ತೊಗಟೆಯನ್ನು ಲಿಂಬೆಹಣ್ಣಿನ ರಸದಲ್ಲಿ ಚೆನ್ನಾಗಿ (ನುಣ್ಣಗೆ) ಅರೆದುಕೊಳ್ಳಬೇಕು. ನೀರನ್ನು ಬೆರಸಬಾರದು. ನಂತರ ಹಾವು, ಚೇಳು ಕಡಿದ ಜಾಗದ ಮೇಲ್ಭಾಗದಿಂದ ಕೆಳಭಾಗದವರೆಗೆ ಕೆಳಮುಖವಾಗಿ ಹಚ್ಚಬೇಕು.

### ಕಂಬಳಿ ಹುಳು ಮುಟ್ಟಿದಾಗ

ಹೆದ್ದಂಬೆ ಗಿಡದ ಬೇರನ್ನು ನೀರು ಬೆರಸದೆ, ನಿಂಬೆಹಣ್ಣಿನ ರಸದಲ್ಲಿ ಅರೆದು ಕಂಬಳಿ ಹುಳು ಮುಟ್ಟಿದ ಜಾಗಕ್ಕೆ ದಿನದಲ್ಲಿ ೪ ಬಾರಿ ಹಚ್ಚಬೇಕು ೩ ದಿನದವರೆಗೆ.

### ನರದ ದೌರ್ಬಲ್ಯ

ನರದ ದೌರ್ಬಲ್ಯವಾದಾಗ ಉಡಾದ ಮಾಂಸವನ್ನು ತಿನ್ನುವುದರಿಂದ ನರದ ದೌರ್ಬಲ್ಯ ವಾಸಿಯಾಗುತ್ತದೆ.

### ಸರ್ಪಹುಣ್ಣು

ಕಾವಿಕಲ್ಲು ಮತ್ತು ಸರ್ಪದ ಪೊರೆಯನ್ನು ಮಿಶ್ರಣಮಾಡಿ ಗಾಯವಾದ ಸ್ಥಳದಲ್ಲಿ ಹಚ್ಚಬೇಕು. ಅವರಿಗೆ ಕರೆದ ತಿನಿಸುಕೊಡಬಾರದು. ೩ ತಿಂಗಳವರೆಗೆ ಸರ್ಪಹುಣ್ಣಿನ ಪ್ರಭಾವ ಇರುತ್ತದೆ.

### ಕೈ-ಕಾಲು ಉಳುಕಿದರೆ

ಕೈ, ಕಾಲು, ಉಳುಕಿದರೆ ಅಂತಹ ಸಂದರ್ಭದಲ್ಲಿ ಕೊಬ್ಬರಿ ಎಣ್ಣೆ, ಸಾಸವಿ ಎಣ್ಣೆ, ಬೊಳ್ಳೊಳ್ಳಿಯಲ್ಲಿ ಅರಿದು ಉಳುಕಿದ ಜಾಗಕ್ಕೆ ಹಚ್ಚಿ ತಿಕ್ಕಬೇಕು. ದಿನದಲ್ಲಿ ೨ ಬಾರಿ ಬೆಳಗ್ಗೆ ಸಂಜೆ ೩ ದಿನ ಹಚ್ಚಿ ತಿಕ್ಕಬೇಕು.

### ಕುರುವು

ಕುರುವು ಆದ ಜಾಗಕ್ಕೆ ಬೊಳ್ಳೊಳ್ಳಿಯನ್ನು ಸಣ್ಣಾಗಿ ಪುಡಿಮಾಡಿ ಹಚ್ಚುವುದರಿಂದ ಕುರುವು ಒಡೆದು ಗಾಯ ವಾಸಿಯಾಗುತ್ತದೆ. ಹಾಗೂ ಈ ಗಾಯಕ್ಕೆ ಜಿಗುಟು ಪಟ್ಟಿಯನ್ನು ಹಚ್ಚಬೇಕು.

### ಹಲ್ಲು ನೋವು

ಹಲ್ಲು ನೋವು ಬಂದಾಗ ಅರಿಶಿಣಪುಡಿ, ಉಪ್ಪು, ಲವಂಗವನ್ನು ಕಲಸಿ ಚೆನ್ನಾಗಿ ಪುಡಿಮಾಡಿ ನೋವು ಆದ ಹಲ್ಲಿಗೆ ಹಚ್ಚಿಕೊಳ್ಳುವುದರಿಂದ ಹಲ್ಲು ನೋವು ಕಡಿಮೆಯಾಗುತ್ತದೆ.

### ಗಾಯವಾದರೆ

ಗಾಯವಾದರೆ ಅರಿಶಿಣಪುಡಿ, ಸಕ್ಕರೆ ಪೌಡರವನ್ನು ಹಚ್ಚಿಕೊಳ್ಳುವುದರಿಂದ ಗಾಯ ಬೇಗನೆ ವಾಸಿಯಾಗುತ್ತದೆ.

### ಚೇಳು ಕಡಿದರೆ

ತಿನ್ನುವ ಎಲೆ (ವಿಳ್ಯದ ಎಲೆ)ಯಲ್ಲಿ ಗೊಳಗೊಳಕಿ ಮುಳ್ಳು ಹಾಕಿ, ಸಿಂಧಿಬಾರಿಗೆಯ ತುದಿಯನ್ನು ಮುರಿದು ಹಾಕಿ ಅದನ್ನು ತಿನ್ನಲು ಕೊಡಬೇಕು. ತಿಂದ ನಂತರ ಚೋಳು ಕಡಿದ ನೋವು ಕಡಿಮೆಯಾಗುತ್ತದೆ.

## ಮಲಬದ್ಧತೆ

೧. ಬರೀ ಹೊಟ್ಟೆಯಲ್ಲಿ ಒಂದು ಲೀಟರ್ ನೀರನ್ನು ಕುಡಿಯಬೇಕು. ಬೇರೆ ಏನನ್ನು ತಿನ್ನಬಾರದು ಒಂದು ಗಂಟೆಯವರೆಗೆ. ಆಗ ಮಲಬದ್ಧತೆ ಕಡಿಮೆಯಾಗುತ್ತದೆ.

೨. ನಾರುಳ್ಳ ಹಸಿ ತರಕಾರಿಗಳನ್ನು ಹೆಚ್ಚಾಗಿ ಸೇವಿಸುವುದರಿಂದ ಮಲಬದ್ಧತೆ ಕಡಿಮೆಯಾಗುತ್ತದೆ.

೩. ಹೆಸರು ಮೊಳಕೆ ಬರಸಿ ಅಥವಾ ಬೇಯಿಸಿ ತಿನ್ನುವುದರಿಂದ ಮಲಬದ್ಧತೆ ವಾಸಿಯಾಗುತ್ತದೆ.

೪. ಬಾಳೆಹಣ್ಣನ್ನು ಸೇವಿಸುವುದರಿಂದ ಮಲಬದ್ಧತೆಗೆ ಅತ್ಯಂತ ಸೂಕ್ತ ಪರಿಹಾರವಾಗಿದೆ.

೫. ಕಲ್ಲಂಗಡಿ ಹಣ್ಣು, ಎಳೆನೀರು, ಕಿತ್ತಳೆ, ದ್ರಾಕ್ಷಿ ಸೇವನೆಯು ಮಲಬದ್ಧತೆಗೆ ಬಹಳ ಉಪಯುಕ್ತ.

## ಹೆಚ್ಚು ಬೇದಿಯಾಗುತ್ತಿದ್ದರೆ

ಅತಿಯಾಗಿ ಬೇಧಿಯಾಗುತ್ತಿದ್ದರೆ ಅಂತಹ ಸಂದರ್ಭದಲ್ಲಿ ಸಕ್ಕರೆ, ಉಪ್ಪನ್ನು ಬೆರೆಸಿದ ನೀರನ್ನು ಕೊಡಬೇಕು. ತಕ್ಷಣ ಭೇದಿ ಕಡಿಮೆಯಾಗುತ್ತದೆ. ಹಾಗೂ ನಿಂಬೆ ರಸ ಹಾಕಿದ ನೀರನ್ನು ಕುಡಿಯುವುದರಿಂದ ಬೇಧಿ ಕಡಿಮೆಯಾಗುತ್ತದೆ.

## ಜ್ವರ

ಕರಿ ಬಣ್ಣದ ಆಡಿನ ಹಸಿ ಹಾಲನ್ನು ಜ್ವರ ಬಂದ ವ್ಯಕ್ತಿಯ ಮೈಗೆ ಹಚ್ಚಬೇಕು. ತಕ್ಷಣವೇ ಜ್ವರ ಕಡಿಮೆಯಾಗುತ್ತದೆ.

## ಹಸಿವು ಕಟ್ಟಿದವರಿಗೆ

ಹಬ್ಬಗೋಳ ತಪ್ಪಲನ್ನು ಬೆಳಗ್ಗೆ ಎದ್ದ ತಕ್ಷಣವೇ ಹಸಿ ಹೊಟ್ಟೆಯಲ್ಲಿ ತಿನ್ನಬೇಕು.

## ಅಜೀರ್ಣದಿಂದ ಆದ ವಾಂತಿಗೆ

ಓಮಿನಕಾಳಿನ ಕಷಾಯಕ್ಕೆ ಲಿಂಬೆಹುಳಿ, ಜೇನುತುಪ್ಪವನ್ನು ಸೇರಿಸಿಕೊಂಡು ಕುಡಿಯುವುದರಿಂದ ವಾಂತಿ ಕಡಿಮೆಯಾಗುತ್ತದೆ.

## ಪಿತ್ತದಿಂದಾದ ವಾಂತಿಗೆ

೧. ಹೆಸರುಕಾಳು ಮತ್ತು ನುಗ್ಗೆಸೊಪ್ಪನ್ನು ಬೇಯಿಸಿ ಬೆಲ್ಲದೊಂದಿಗೆ ಹಾಳ ಹೊಟ್ಟೆಗೆ ತಿನ್ನಬೇಕು ಆಗ ವಾಂತಿಯು ಕಡಿಮೆಯಾಗುತ್ತದೆ.

೨. ಮುರುಗಲ ಹಣ್ಣಿನ ರಸಕ್ಕೆ ಬೆಲ್ಲವನ್ನು ಸೇರಿಸಿಕೊಂಡು ಬರಿ ಹೊಟ್ಟೆಗೆ ಕುಡಿಯುವುದರಿಂದ ವಾಂತಿಯು ಕಡಿಮೆಯಾಗುತ್ತದೆ.

## ನಂಜು ತುರಿಕೆಗೆ

ಕರಿಬೇವಿನ ಸೊಪ್ಪು, ಕಾಳ ಜೀರಿಗೆ ಸೊಪ್ಪು, ಹಿರಾತ ಕಡ್ಡಿಗಳನ್ನು ಸಮ ಪ್ರಮಾಣದಲ್ಲಿ ತೆಗೆದುಕೊಂಡು ನೀರಿನೊಂದಿಗೆ ಅರೆದು ಹಚ್ಚುವುದರಿಂದ ಶರೀರದ ಮೇಲಿನ ತುರಿಕೆ ಕಡಿಮೆಯಾಗುತ್ತದೆ. ಹಾಗೆನೇ ಮೇಲೆ ಹೇಳಿದ ಮೂರು ಬಗೆ ಸೊಪ್ಪುಗಳನ್ನು ಕಷಾಯ ಮಾಡಿ ಕುಡಿದರೆ ಶರೀರದೊಳಗಿನ ನಂಜುಸಹ ಗುಣವಾಗುತ್ತದೆ.

**ತಲೆಭಾರ**

ನೀಗೆ ಹುಡಿ, ಸಾಸಿವೆ, ೨ ಬೆಳ್ಳಿಗೆ ಅಕ್ಕಿ ಹಾಕಿ ಮುಂಡಿಗಡ್ಡೆದಂಟು ಬಿಸಿ ಮಾಡಿ ಅದರ ನೀರಲ್ಲಿ ಇದೆಲ್ಲ ಹಾಕಿ ಅರೆದು ತಲೆಗೆ ಹಚ್ಚಬೇಕು. (ನೆತ್ತಿಗೆ ಹಚ್ಚಬೇಕು).

**ಕಣ್ಣು ಉರಿಗೆ**

ಕೇವುಳ ಹೂವನ್ನು ಶುದ್ಧ ನೀರಿನಲ್ಲಿ ಹಾಕಿ ಕಣ್ಣನ್ನು ತೊಳೆಯಬೇಕು. ಹೊನ್ನೆ ಸೊಪ್ಪು ಅಥವಾ ಪಾಡವಾಲ ಸೊಪ್ಪನ್ನು ನೀರಿನಲ್ಲಿ ಹಿಸುಕಿ ಕಣ್ಣು ತೊಳೆಯಬಹುದು. ಇದರಿಂದ ಕಣ್ಣು ಉರಿಯು ಕಡಿಮೆಯಾಗುತ್ತದೆ.

**ಹಾವು ಕಚ್ಚಿದಾಗ**

೧. ಹಾವು ಕಚ್ಚಿದಾಗ ಹಾವುಗಳಿಗೆ ಅನುಗುಣವಾಗಿ ವಿಷಯವು ಏರತೊಡಗುತ್ತದೆ. ತಕ್ಷಣ ಆ ವ್ಯಕ್ತಿಗೆ ಮೈಮೇಲಿನ ಪ್ರಜ್ಞೆಯು ಕಳೆಯತೊಡಗುತ್ತದೆ. ಅಂತಹ ವ್ಯಕ್ತಿಗೆ ಮೊದಲು ಹಾವು ಕಚ್ಚಿದ ಜಾಗವನ್ನು ಬ್ಲೇಡಿನಿಂದ ಸ್ವಲ್ಪ ಕೊಯ್ದು ಅದರ ಮೇಲ್ಭಾಗಕ್ಕೆ ಗಟ್ಟಿಯಾದ ಬಟ್ಟೆಯನ್ನು ಕಟ್ಟಬೇಕು. (ವಿಷ ಮೇಲೇರದಿರಲೆಂದು) ನಂತರ ವಿಷಯವು ಏರಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಲು ಬೇವಿನ ಸೊಪ್ಪನ್ನೋ ಇಲ್ಲವೆ ಮೆಣಸಿನಕಾಯನ್ನು ತಿನ್ನಲು ಕೊಡಬೇಕು. ಅದನ್ನು ತಿನ್ನುತ್ತಿರುವ ವ್ಯಕ್ತಿಗೆ ಹಾವಿನ ವಿಷ ಏರಿದ್ದರೆ ಕಹಿಯಾಗಲಿ/ಖಾರವಾಗಲಿ ಅನಿಸುವುದಿಲ್ಲ. ವಿಷಯವು ಮೇಲೇರದಿರಲೆಂದು ಕಲ್ಲನ್ನು ತಲೆಯ ಮೇಲೆ ಹೋರಿಸುತ್ತಾರೆ. ಆ ವ್ಯಕ್ತಿಯನ್ನು ರಾತ್ರಿಯೆಲ್ಲಾ ನಿದ್ದೆಕಾಯುವಂತೆ ಹೇಳುತ್ತಾರೆ.

೨. ತಿರುಕಸಾಲೆ ಸೊಪ್ಪನ್ನು ಬೇರುಸಹಿತವಾಗಿ ತಂದು ಅಕ್ಕಿಯನ್ನು ತೊಳೆದ ನೀರಿನಲ್ಲಿ ಅರೆದು ಸೋಸಿಕೊಂಡು ಕಾಲು ಕಾಲು ಗಂಟೆಗೆ ಒಂದೊಂದು ತೊಲದಂತೆ ಕುಡಿಯುತ್ತಿದ್ದರೆ ಹಾವಿನ ವಿಷವು ಇಳಿಯುತ್ತದೆ.

೩. ಹಾವು ಕಡಿದ ಕೂಡಲೇ ಹಾಗಲಕಾಯಿ ಎಲೆಗಳ ರಸವನ್ನು ತೆಗೆದು ಕುಡಿಸಿದರೆ ವಾಂತಿಯಾಗಿ ಹಾವಿನ ವಿಷವೆಲ್ಲ ಹೊರಬಂದು ವಿಷ ಇಳಿಯುತ್ತದೆ.

೪. ಎಕ್ಕದ ಒಣಗಿದ ಬೇರು, ಹಸಿಯ ಮೈಲುತುತ್ತ ಇವುಗಳನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಪುಡಿಮಾಡಿ ಬಟ್ಟೆಯಿಂದ ಸೋಸಿಕೊಂಡು ಅದರಲ್ಲಿನ ಅರ್ಧಭಾಗವನ್ನು ಹಾವು ಕಡಿಸಿಕೊಂಡ ಮನುಷ್ಯನ ಎರಡೂ ಮೂಗಿನ ಹೊಳ್ಳೆಳಿಗೆ ತುಂಬಿ, ಬೇರೊಬ್ಬರ ಬಾಯಿಯಿಂದ ಮೂಗಿನೊಳಗೆ ಜೋರಾಗಿ ಉಸಿರುಸೇರುವಂತೆ ಕಿವಿಯೊಳಗೆ ಊದಿದರೆ ಹಾವು ಕಡಿದ ವ್ಯಕ್ತಿಗೆ ವಾಂತಿಯಾಗಿ ವಿಷವೆಲ್ಲಾ ಇಳಿದುಹೋಗುತ್ತದೆ.

**ಚೇಳು ಕಡಿದಾಗ**

೧. ಏಲಕ್ಕಿ ಬೀಜಗಳನ್ನು ಬಾಯಿಯಲ್ಲಿ ಹಾಕಿಕೊಂಡು ಅಗೆದು ಚೇಳು ಕಡಿದವರಿಗೆ ಕಿವಿಗೆ ಗಾಳಿಯು ಸೇರುವಂತೆ ಗಟ್ಟಿಯಾಗಿ ಊದಬೇಕು. ಮತ್ತು ಸ್ವಲ್ಪ ಭಾಗವನ್ನು ಕಡದಿರುವ ಜಾಗಕ್ಕೆ ಹಚ್ಚಿ ಮೆಲ್ಲಗೆ ತಿಕ್ಕಬೇಕು.

೨. ಚೇಳು ಕಚ್ಚಿದ ಜಾಗಕ್ಕೆ ಈರುಳ್ಳಿಗಡ್ಡೆಯನ್ನು ಜಜ್ಜಿ ಕಟ್ಟುವುದರಿಂದ ವಿಷ ಇಳಿದು ಉರಿ ಕಡಿಮೆಯಾಗುವುದು.

೩. ಎಕ್ಕೆಯ ಹಾಲನ್ನು ಚೇಳು ಕಡಿದ ಸ್ಥಳಕ್ಕೆ ಹಚ್ಚಿದರೆ ವಿಷವು ನಾಶವಾಗುತ್ತದೆ.

೪. ತುಳಸಿಯ ರಸವನ್ನು ಚೇಳು ಕಚ್ಚಿದ ಸ್ಥಳಕ್ಕೆ ಮೇಲೆ ಹಚ್ಚಿ ಅದರ ಎಲೆಯನ್ನು ನೀರಿನಲ್ಲಿ ಅರೆದು ೫ ನಿಮಿಷಗಳಿಗೊಮ್ಮೆ ಕುಡಿಯುವುದರಿಂದ ವಿಷ ಕಡಿಮೆಯಾಗುವುದು.

೪. ಇಪ್ಪೆಯ ಹೂವನ್ನು ಅರೆದು ಹಚ್ಚಿದರೂ ಚೇಳಿನ ವಿಷವು ಇಳಿದು ಗುಣಮುಖವಾಗುತ್ತದೆ.

**ಝುರಿ ಕಚ್ಚಿದಾಗ**

ತುಳಸಿಯ ರಸದಲ್ಲಿ ಉಪ್ಪನ್ನು ಕೂಡಿಸಿ ಹಚ್ಚುವುದರಿಂದ ಮತ್ತು ಎಲೆಗಳನ್ನು ತಿನ್ನುವುದರಿಂದ ಝುರಿ ಕಡಿತದ ನೋವು ನಿವಾರಣೆಯಾಗುತ್ತದೆ.

**ಎಲ್ಲಾ ವಿಷದ ಜಂತುಗಳಿಗೆ**

೧. ನಿಂಬೆಯ ಹಣ್ಣನ್ನು ಮುಖ್ಯವಾಗಿ ಅದರ ಬೀಜಗಳನ್ನು ತಿಂದುಬಿಡಬೇಕು ಅಥವಾ ನೀರಿನೊಡನೆ ಅರೆದು ಕುಡಿಯಬೇಕು.

೨. ನೇರಳೆಗಿಡದ ಎಲೆಗಳನ್ನು ನೀರಿನೊಡನೆ ಅರೆದು ಕುಡಿಯುವುದರಿಂದ ವಿಷ ಇಳಿಯುತ್ತದೆ.

೩. (ನಾಯಿ, ತೋಳ, ಕೋತಿ) ಮುಂತಾದ ಪ್ರಾಣಿಗಳು ಕಡಿದಾಗ ಉಂಟಾಗುವ ಗಾಯಗಳಿಗೆ ಜೇನುತುಪ್ಪವನ್ನು ಹಚ್ಚಬೇಕು. ಮತ್ತು ಮೂರು ತೊಲಜೇನುತುಪ್ಪವನ್ನು ಒಂದು ಚಟಾಕು ನೀರಿನಲ್ಲಿ ಕೂಡಿಸಿ ಕುದಿಸಬೇಕು. ಇದರಿಂದ ವಿಷವು ನಿವಾರಣೆಯಾಗುವುದಲ್ಲದೇ ಕಡಿದ ಸ್ಥಳದಲ್ಲಿ ಗುರುತು ಸಹ ಉಳಿಯುವುದಿಲ್ಲ.

**ಮುಖದಲ್ಲಿ ಕಪ್ಪು, ಬಿಳಿ ಮಚ್ಚೆಗಳು ಆದಾಗ**

೧. ಕೊತ್ತಂಬರಿ ಅಥವಾ ಮೆಂತ್ಯೆ ಸೊಪ್ಪನ್ನು ರುಬ್ಬಿ ಅದನ್ನೆ ವಾರಕ್ಕೆ ಒಂದು ಬಾರಿಯಂತೆ ಮುಖಕ್ಕೆ ಹಚ್ಚಿ, ಒಂದುಗಂಟೆ ಬಿಟ್ಟು ತೊಳೆಯಬೇಕು. ಹೀಗೆ ಹಚ್ಚಿಕೊಳ್ಳುವುದರಿಂದ ಮಚ್ಚೆ, ಬಿಳಿ, ಕಪ್ಪು ಕಲೆಗಳು ಹೋಗುತ್ತವೆ. ಹೀಗೆ ಮಚ್ಚೆ/ಕಲೆಗಳು ಹೋಗುವವರೆಗೂ ಹಚ್ಚಿಕೊಳ್ಳಬೇಕು.

೨. ನಿಂಬೆರಸ ಮತ್ತು ಮೊಸರನ್ನು ಮುಖಕ್ಕೆ ಹಚ್ಚಿ ೧೫-೨೦ ನಿಮಿಷಗಳ ಕಾಲ ಬಿಟ್ಟು ಮುಖ ತೊಳೆಯುವುದರಿಂದ ಕಲೆಗಳು ವಾಸಿಯಾಗುತ್ತವೆ. ಈ ರೀತಿ ವಾರಕ್ಕೆರಡು ಬಾರಿಯಂತೆ ಒಂದು ತಿಂಗಳು ಹಚ್ಚಿಕೊಳ್ಳಬೇಕು.

**ಕೆಮ್ಮು**

ಮೆಣಸು, ಚಿತ್ರತೆಬೇರು, ಅತಿ ಮಧುರ, ಶುಂಠಿ, ಬೆಲ್ಲ ಇವುಗಳೆಲ್ಲವನ್ನು ಚೆನ್ನಾಗಿ ಕುಟ್ಟಿ ಎರಡು ಲೋಟ ನೀರಿನಲ್ಲಿ ಹಾಕಿ, ನೀರನ್ನು ಚೆನ್ನಾಗಿ ಕುದಿಸಬೇಕು. ಒಂದುಲೋಟ ನೀರು ಆಗುವವರೆಗೆ ಕುದಿಸಿ ಈ ನೀರನ್ನು ದಿನಕ್ಕೆ ಮೂರು ಸಲ ಕುಡಿದರೆ ಕೆಮ್ಮು ವಾಸಿಯಾಗುತ್ತದೆ.

**ಮಲಗಟ್ಟಿಯಾಗಿಬಂದು ಮಲ ಹೋಗುವ ಸಂದರ್ಭದಲ್ಲಿ ನೋವು ಆದರೆ**

ಊಟ ಮಾಡುವ ಮುಂಚೆ ಹಸಿ ತರಕಾರಿಗಳನ್ನು ತಿಂದು ನಂತರ ಊಟ ಮಾಡಿ ಚೆನ್ನಾಗಿ ನೀರು ಕುಡಿಯುತ್ತಿದ್ದರೆ ಈ ರೋಗ ವಾಸಿಯಾಗುತ್ತದೆ.

**ಉಷ್ಣ ಹೆಚ್ಚಾದರೆ**

೧. ಹೆಸರು ಬೇಳೆಯಿಂದ ಕುದಿಸಿದ ಗಂಜಿಯನ್ನು ಕುಡಿಯುವುದರಿಂದ ಉಷ್ಣ ಕಡಿಮೆಯಾಗುತ್ತದೆ.

೨. ರಾಗಿ ಗಂಜಿಯನ್ನು ಕುಡಿಯುವುದರಿಂದ ಉಷ್ಣವು ಕಡಿಮೆಯಾಗುತ್ತದೆ.

೩. ನೀರು ಮಜ್ಜಿಗೆಯನ್ನು ಕುಡಿಯುವುದರಿಂದಲೂ ಉಷ್ಣ ಕಡಿಮೆಯಾಗುತ್ತದೆ.

**ಗಂಟಲು ಕಿರಿಕಿರಿ ಮಾಡುತ್ತಿದ್ದರೆ**

ಹಾಲು ಅಥವಾ ಟೀ ಮಾಡುವಾಗ ಅದರಲ್ಲಿ ಹಸಿ ಶುಂಠಿಯನ್ನು ಕುಟ್ಟಿಹಾಕಿ, ಕುದಿಸಿ ಕುಡಿಯುವುದರಿಂದ ಗಂಟಲು ಕಿರಿ ಕಿರಿ ಮಾಡುವುದು ವಾಸಿಯಾಗುತ್ತದೆ.

**ತಲೆನೋವು**

ಪಪ್ಪಾಯಿ ಎಲೆಗಳನ್ನು ತಲೆಗೆ ಕಟ್ಟಿಕೊಂಡು ಮಲಗುವುದರಿಂದ ತಲೆನೋವು, ತಲೆಭಾರ ಕಡಿಮೆಯಾಗುತ್ತದೆ.

**ಬಿದ್ದಗಾಯ, ತರಚಿದಗಾಯವಾದರೆ**

ಗಾಯಗಳಿಗೆ ಕೊಬ್ಬರಿ ಎಣ್ಣೆಯನ್ನು ಹಚ್ಚುವುದರಿಂದ ಗಾಯಬೇಗ ವಾಸಿಯಾಗುತ್ತದೆ.

**ಎದೆನೋವು**

ಎದೆನೋವು ಬಂದಾಗ ತೆಂಗಿನಕಾಯಿಯ ಹಾಲನ್ನು ಕುಡಿದರೆ ವಾಸಿಯಾಗುತ್ತದೆ.

**ಹೃದಯದ ಸಮಸ್ಯೆಗೆ**

ಹೃದಯದ ಸಮಸ್ಯೆಯನ್ನು ತಡೆಯಲು ಅಡುಗೆಯಲ್ಲಿ ದಾರಾಳವಾಗಿ ಕೊಬ್ಬರಿ ಎಣ್ಣೆಯನ್ನು ಬಳಸಬೇಕು.

**ದೇಹದಲ್ಲಿ ಉಷ್ಣ ಹೆಚ್ಚಾದರೆ**

ಬೆಟ್ಟದ ನೆಲ್ಲಿಕಾಯಿ, ಉಳ್ಳಿಕಾಳು, ಅಗಸೆಸೊಪ್ಪು, ತೊಗರಿಬೇಳೆಯನ್ನು ಆಹಾರದಲ್ಲಿ ಸೇರಿಸಿ ಸೇವಿಸುವುದರಿಂದ ದೇಹದ ಉಷ್ಣಾಂಶ ಕಡಿಮೆಯಾಗುತ್ತದೆ.

**ಮೈ ಮೇಲೆ ಬರುವ ಗುಳ್ಳೆಗಳು**

ಚೌಡಂಗಿ ಸೊಪ್ಪು, ಅರಿಶಿನ, ಉಪ್ಪನ್ನು ಸೇರಿಸಿ ಕುಟ್ಟಿ ಸ್ನಾನ ಮಾಡುವ ಮುನ್ನ ೧೦ ನಿಮಿಷದ ಮೊದಲೂ ಮೈಗೆ ಸವರಿಕೊಂಡು ನಂತರ ಬಿಸಿ ನೀರಿನಲ್ಲಿ ಸ್ನಾನ ಮಾಡುವುದರಿಂದ ಈ ಕಾಯಿಲೆ ವಾಸಿಯಾಗುತ್ತದೆ.

**ಇಲಿ ಕಚ್ಚಿದರೆ**

ಉತ್ರಾಣಿಗೆ ಸೊಪ್ಪಿನ ಕುಡಿಗೆ ಜೇನುತುಪ್ಪವನ್ನು ಹಾಕಿಕೊಂಡು ಗಾಯ ವಾಸಿಯಾಗುವವರೆಗೆ ದಿನಕ್ಕೆ ಒಂದುಬಾರಿಯಂತೆ ತಿಂದರೆ ಬೇಗ ವಾಸಿಯಾಗುತ್ತದೆ.

**ಪಥ್ಯ**

ಬರಿ ಮಜ್ಜಿಗೆ, ಹಾಲು, ಅನ್ನ ತಿನ್ನಬೇಕು. ಕಾರ ಮಸಾಲೆ, ಕರೆದ ಪದಾರ್ಥಗಲನ್ನು ತಿನ್ನಬಾರದು.

**ಕಸಕಡ್ಡಿಗಳಿಂದ ಕಣ್ಣು ನೋವಾದರೆ**

ಶುದ್ಧ ತುಳಸಿ ಅಥವಾ ನಾಯಿ ತುಳಸಿ ಬೀಜಗಳನ್ನು ಅಂಗೈಯಲ್ಲಿ ಹಾಕಿಕೊಂಡು ಉಜ್ಜಿ ಸ್ವಚ್ಛಗೊಳಿಸಿ ಕಣ್ಣಿನಲ್ಲಿ ಹಾಕಿಕೊಳ್ಳುವುದರಿಂದ ಲೋಳೆಯಂತಾಗಿ ಕಸದೊಂದಿಗೆ ಐದು ನಿಮಿಷದಲ್ಲಿ ಹೊರಬರುತ್ತದೆ.

**ಕಣ್ಣಿಗೆ ಪೆಟ್ಟಾಗಿದ್ದರೆ ಅಥವಾ ಕಣ್ಣು ಕೆಂಪಾಗಿದ್ದರೆ**

೧. ಲೋಳೆ ಸರದ ಎಲೆಯನ್ನು ಎರಡು ಹೋಳಾಗುವಂತೆ ಉದ್ದ ಸೀಳಿ ತಿರುಳನ್ನು ತೆಗೆಯಬೇಕು ರಾತ್ರಿ ವೇಳೆಯಲ್ಲಿ ಕಣ್ಣಿನ ಮೇಲೆ ಕಟ್ಟಿಕೊಂಡು ರಾತ್ರಿ ನಿದ್ರಿಸಬೇಕು. ಈ ರೀತಿ ಮಾಡುವುದರಿಂದ ಕಣ್ಣಿಗೆ ಪೆಟ್ಟಾಗಿದ್ದು, ಕಣ್ಣು ಕೆಂಪಾಗಿದ್ದರೆ ಕಡಿಮೆಯಾಗುತ್ತದೆ.

೨. ಉತ್ರಾಣಿ ಸಸ್ಯದ ಎಲೆಗಳನ್ನು ಸ್ವಚ್ಛ ನೀರಿನಲ್ಲಿ ತೊಳೆದು ಆರಿಸಿದ ನಂತರ ಎಲೆಯಿಂದ ರಸ ತೆಗೆದು ಈ ರಸವನ್ನು ಕಣ್ಣಿಗೆ ಹನಿ ಹನಿಯಾಗಿ ರಾತ್ರಿ ವೇಳೆ ಬಿಡಬೇಕು. ಹೀಗೆ ಮೂರು ದಿನ ಕಣ್ಣಿಗೆ ಔಷಧಿಯನ್ನು ಬಿಡುವುದರಿಂದ ರೋಗ ವಾಸಿಯಾಗುತ್ತದೆ.

**ಪಥ್ಯ**

ಬಿಸಿಲಿನಲ್ಲಿ ಹೆಚ್ಚು ಓಡಾಡಬಾರದು. ಬಿಸಿ ಆಹಾರ ಪದಾರ್ಥ, ಎಣ್ಣೆ ಮಸಾಲೆ ಪದಾರ್ಥವನ್ನು ಸೇವಿಸಬಾರದು. ಇದನ್ನು ಮೂರುದಿನ ರಾತ್ರಿ ವೇಳೆ ಮಾತ್ರ ಅನುಸರಿಸಬೇಕು.

**ಬಾಯಿ ಹುಣ್ಣು**

೧. ನಾಲಿಗೆ ಬಾಯಿಯಲ್ಲಿ ಒಳ ಅಂಗಳದಲ್ಲಿ ಹುಣ್ಣುಗಳಾದರೆ, ಹುಳಿ ಬಸಲೆ, ದೊಡ್ಡ ಪತ್ರೆ, ಇವುಗಳನ್ನು ಸಮ ಪ್ರಮಾಣದಲ್ಲಿ ೩ ಹೊತ್ತು ೫ ದಿವಸ ಹಸಿದಾದ ಒಂದು ಹಿಡಿ ಎಲೆಯನ್ನು ತಿನ್ನುವುದರಿಂದ ಬಾಯಿ ಹುಣ್ಣು ವಾಸಿಯಾಗುತ್ತದೆ.

೨. ಹಸಿ ಕ್ಯಾರೇಟ್ ಮತ್ತು ಒಣಕೊಬ್ಬರಿ, ಗಸಗಸೆ ಈ ಮೂರನ್ನೆ ಅರೆದು ತಿನ್ನುವುದರಿಂದ ಬಾಯಿ ಹುಣ್ಣು ಕಡಿಮೆಯಾಗುತ್ತದೆ. ಇದನ್ನು ಬಾಯಿಹುಣ್ಣು ಗುಣವಾಗುವವರೆಗೂ ಬಳಸಬಹುದು.

**ಗಂಟಲು ಬಾಧೆ**

೧. ಮಕ್ಕಳಲ್ಲಿ ಗಂಟಲಿನ ಊತಬಾಧೆ, ನೀರು, ಆಹಾರ ಸೇವಿಸಲು ನೋವುಂಟಾದರೆ, ಗರಗಲ ಸಸ್ಯದ ರಸವನ್ನು ತೆಗೆದು, ಸ್ವಲ್ಪ ಬಿಸಿಮಾಡಿ ೨ ಚಮಚದಂತೆ ಮಲಗುವ ಸಮಯದಲ್ಲಿ ಕುಡಿಯಬೇಕು.

೨. ಉಪ್ಪಿನ ದ್ರಾವಣ ತಯಾರಿಸಿ, ಸ್ವಲ್ಪ ಉಗುರ ಬೆಚ್ಚಗ ನೀರನ್ನು ಕಾಯಿಸಿ, ಗಂಟಲಲ್ಲಿ ಹಾಕಿಕೊಂಡು, ತಲೆ ಮೇಲೆತ್ತಿ ಮುಕ್ಕಳಿಸುವುದು ಹೀಗೆ ರಾತ್ರಿ ಮಲಗುವಾಗ ಹಾಗೂ ಬೆಳಗ್ಗೆ ಊಟವಾದ ನಂತರ ಹೀಗೆ ಮಾಡುವುದರಿಂದ ಗಂಟಲು ಬಾಧೆ ಕಡಿಮೆಯಾಗುತ್ತದೆ.

೩. ಕುಂಟಗಾನ ಬಳ್ಳಿಯ ಒಂದು ಎಲೆ, ಸ್ವಲ್ಪ ಜೇನು ತುಪ್ಪ ಎರಡನ್ನು ಮಿಶ್ರಣ ಮಾಡಿ ತಿನ್ನುವುದರಿಂದ ನಾಯಿಕೆಮ್ಮು ಗಂಟಲು ಬಾಧೆ ಕಡಿಮೆಯಾಗುತ್ತದೆ. ಎರಡು ಮೂರುದಿನ ಎರಡು ಹೊತ್ತು ಸೇವಿಸಬೇಕು.

**ರಕ್ತ ಭೇದಿ**

ಗಂಡು ಕಾಳಿಂಗ (ಅಡಿಕೆ ಸೊಪ್ಪು)ನ್ನು ಜಜ್ಜಿ ಅದರ ರಸವನ್ನು ತೆಗೆದು ಒಂದು ಬಾರಿಗೆ ಒಂದು ಚಿಕ್ಕ ಲೋಟದಂತೆ ದಿನಕ್ಕೆ ಎರಡು ಬಾರಿಯಂತೆ ೩-೪ದಿನ ಸೇವಿಸಬೇಕು.

**ನೀರಿನಿಂದ ಕೂಡಿದ ಭೇದಿ (ಜಲಭೇದಿ)**

೧. ತುಂಗೆ ಗಡ್ಡೆ, ದಾಳಿಂಬೆ ಹಣ್ಣಿನ ಸಿಪ್ಪೆಯನ್ನು ಜಜ್ಜಿ, ಒಂದು ಲೋಟ ನೀರನ್ನು ಒಂದು ಪಾತ್ರೆಗೆ ಹಾಕಿ, ಜಜ್ಜಿದ ದಾಳಿಂಬೆ ಸಿಪ್ಪೆ, ತುಂಗೆ ಗಡ್ಡೆಯನ್ನು ಸಮಪ್ರಮಾಣದಲ್ಲಿ ಸ್ವಲ್ಪ ಬೆಚ್ಚಗೆ ಕಾಯಿಸಿ, ಬಟ್ಟೆಯಲ್ಲಿ ಸೋಸಿ ದಿನಕ್ಕೆ ನಾಲ್ಕು ಬಾರಿಯಂತೆ ಸಕ್ಕರೆ ನೀರಿನೊಂದಿಗೆ ಮೂರುದಿನ ಸೇವಿಸುವುದರಿಂದ ಜಲಭೇದಿ ಕಡಿಮೆಯಾಗುತ್ತದೆ.

೨. ಒಂದು ಬಟ್ಟಲು ನೀರಿಗೆ ಒಂದು ಗೇಣು ಎರಡು ಅಂಗುಲ ಸಿಹಿ ಬೇವಿನ ಕೆಂಪು ತೊಗಟೆಯನ್ನು ಜಜ್ಜಿ ಹಾಕಿ ಅರ್ಧಗಂಟೆ ನೆನೆ ಬಿಟ್ಟು ಕೈಯಿಂದ ಕಿವಿಚಿ ಬಟ್ಟೆಯಲ್ಲಿ ಸೋಸಿ ಒಂದು ಬಟ್ಟಲು ರಸಕ್ಕೆ ಅರ್ಧ ಲೋಟ ಸಕ್ಕರೆಯನ್ನು ಸೇರಿಸಿ ಪ್ರತಿ ರಾತ್ರಿ ಮಲಗುವಾಗ ೩ ರಿಂದ ೫ ದಿನ ಸೇವಿಸುವುದರಿಂದ ಜಲಭೇದಿ ವಾಸಿಯಾಗುತ್ತದೆ.

**ಪಥ್ಯ**

ಎಣ್ಣೆಯಲ್ಲಿ ಕರಿದ ಪದಾರ್ಥಗಳನ್ನು ಸೇವಿಸಬಾರದು. ಗಟ್ಟಿ ರೊಟ್ಟಿ, ಚಪಾತಿಯಂಥಹ ತೆಳುವಾದ ಆಹಾರ ಉತ್ತಮ. ಹೆಚ್ಚು ನೀರನ್ನು ಕುಡಿಯಬೇಕು. ವಿಶ್ರಾಂತಿ ಅಗತ್ಯ.

**ಮೂತ್ರದಲ್ಲಿ ಉರಿ**

೧. ಅರಳೀ ಮರದ ತೊಗಟೆಯ ಕಷಾಯ ಮಾಡಿ ಜೇನುತುಪ್ಪವನ್ನು ಸೇರಿಸಿ ೩-೪ ದಿನಗಳು ಎರಡು ಹೊತ್ತು ಸೇವಿಸುವುದರಿಂದ ಉರಿ ಮೂತ್ರ ಕಡಿಮೆಯಾಗುತ್ತದೆ.

೨. ಒಂದಲಗ ಇಡೀ ಸಸ್ಯವನ್ನು ಜಜ್ಜಿ ರಸವನ್ನು ತೆಗೆದು ಸಕ್ಕರೆಯೊಂದಿಗೆ ದಿನಕ್ಕೆರಡು ಬಾರಿಯಂತೆ ಒಂದು ವಾರ ಸೇವಿಸಿದರೆ ಉರಿ ಮೂತ್ರ ವಾಸಿಯಾಗುತ್ತದೆ.

**ಪೆಟ್ಟಾದಾಗ/ಗಾಯವಾದಾಗ**

೧. ಸೀತಾಫಲದ ಎಲೆಗಳನ್ನು ತಂದು ಒಣಗಿಸಿ ಬಾಣತಿಯಲ್ಲಿ ಹಾಕಿ ಸ್ವಲ್ಪ ಹುರಿದು ಅನಂತರ

ಕುಟ್ಟಿ ಚೂರ್ಣಮಾಡಿ ಸೀಸದಲ್ಲಿ ತುಂಬಿಟ್ಟುಕೊಳ್ಳಬೇಕು. ಅಪಾಯಕರವಾದ ಗಾಯವಾದರೆ ಮತ್ತು ರಕ್ತವು ಹೆಚ್ಚಾಗಿ ಸೋರಿ ಮಾಂಸವು ಹೊರಬಿದ್ದರೆ ಈ ಚೂರ್ಣವನ್ನು ಆಳವಾಗಿ ಗಾಯದಲ್ಲಿ ತುಂಬಿ ಪಟ್ಟಿ ಕಟ್ಟಿದರೆ ಗಾಯವು ಬಹುಬೇಗನೇ ಮಾಯವಾಗುತ್ತದೆ.

೨. ಎಳ್ಳು ಜವೆಹಿಟ್ಟು, ಅತಿಮಧುರದ ಚೂರ್ಣ ಇವುಗಳನ್ನು ಸಮಭಾಗ ಅರೆದು ತುಪ್ಪ ಅಥವಾ ಕೊಬ್ಬರಿ ಎಣ್ಣೆ ಎಳ್ಳೆಣ್ಣೆಗಳೊಡನೆ ಕೂಡಿಸಿ ಬಿಸಿ ಮಾಡಿ ಬೆಚ್ಚಗಿರುವುದನ್ನೇ ಲೇಪಿಸುವುದರಿಂದ ಗಾಯಗಳ ಉರಿ ಶಾಂತವಾಗುತ್ತದೆ.

೩. ಬೇವಿನ ಎಲೆ, ಅತಿಮಧುರ, ಸ್ಯಂಧವ, ಲವಣ ಇವುಗಳನ್ನು ಸಮಭಾಗವಾಗಿ ಮಾಡಿ ಅರೆದು ತುಪ್ಪದೊಡನೆ ಕೂಡಿಸಿ ಹಚ್ಚುವುದರಿಂದ ಗಾಯ ಅಥವಾ ಹುಣ್ಣುಗಳಲ್ಲಿ ಬರುವ ಕೀವು ರಕ್ತ ಕಡಿಮೆಯಾಗುತ್ತದೆ.

### ಜೇನುಹುಳು ಕಡಿದಾಗ

ಸಬ್ಬಸಿಗೆ ಸೊಪ್ಪು ಮತ್ತು ಸ್ಯಂಧವ ಲವಣವನ್ನು ಅರೆದು ತುಪ್ಪದೊಡನೆ ಕೂಡಿಸಿ ಹಚ್ಚುವುದರಿಂದ ಜೇನುನೊಣಗಳ ವಿಷವು ಕಡಿಮೆಯಾಗುತ್ತದೆ.

### ಕಟ್ಟಿರುವೆ ಕಡಿದಾಗ

ಪಪ್ಪಾಯಿ ಗಿಡದ ಹೂವುಗಳನ್ನು ಕೈಯಿಂದ ತಿಕ್ಕಿ ಅದರ ರಸವನ್ನು ಕಡಿದಿರುವ ಜಾಗಕ್ಕೆ ಹಚ್ಚುವುದರಿಂದ ಕಡಿಮೆಯಾಗುತ್ತದೆ.

### ಮೂಲವ್ಯಾಧಿಗೆ

೧. ಕರಿಯ ಎಳ್ಳು ಸಕ್ಕರೆಯನ್ನು ತಿಂದು ಆಡಿನ ಹಾಲನ್ನು ಕುಡಿದರೆ ಮೂಲವ್ಯಾಧಿಯಲ್ಲಿ ಬೀಳುವ ರಕ್ತವು ಕಡಿಮೆಯಾಗುತ್ತದೆ.

೨. ಮೂಲಂಗಿ ಸೊಪ್ಪಿನ ರಸ, ಹೂನಗೊನೆ ಸೊಪ್ಪನ್ನು ಸಮಪ್ರಮಾಣದಲ್ಲಿ ತೆಗೆದುಕೊಂಡು ಈ ರಸಕ್ಕೆ ಸೈಂಧವ ಲವಣವನ್ನು ಸೇರಿಸಿ ಕುಡಿಯುವುದರಿಂದ ಮೂಲವ್ಯಾದಿಯು ಕಡಿಮೆಯಾಗುತ್ತದೆ.

೩. ಕಹಿ ಸೂರೆಕಾಯಿಯ ಮತ್ತು ಬೆಲ್ಲವನ್ನು ಕಡಲೆಯ ಹುಳಿಯಲ್ಲಿ ಅರೆದು ಲೇಪಿಸಿದರೆ ಮೊಳಕೆಗಳು ನಾಶವಾಗುತ್ತದೆ.

### ಕಾಮಲೆ

೧. ಬಿಳಿ ಈರುಳ್ಳಿರಸ, ಬೆಲ್ಲ, ಅರಿಶಿಣವನ್ನು ಕೂಡಿಸಿ ಮೂಗಿಗೆ ನಶ್ಯದಂತೆ ಏರಿಸುತ್ತಿದ್ದರೆ ಕಾಮಲೆಯು ಗುಣವಾಗುತ್ತದೆ.

೨. ಬಿಲ್ವಪತ್ರೆಯನ್ನು ಅದರ ರಸವನ್ನು ತೆಗೆದು ಬಟ್ಟೆಯಿಂದ ಸೋಸಿಕೊಂಡು ನಿತ್ಯ ಕುಡಿಯುತ್ತಿದ್ದರೆ ಕಾಮಲೆ ಕಡಿಮೆಯಾಗುತ್ತದೆ.

೩. ಔಡಲಗಿಡದ ರಸವನ್ನು ಬೆಳಿಗ್ಗೆ ಒಂದು ಬಾರಿ ೨-೩ ದಿನಗಳ ಕಾಲ ಕುಡಿಸಿದರೆ ಕಾಮಲೆ ಕಡಿಮೆಯಾಗುತ್ತದೆ.

**ಉಗುರು ಸುತ್ತು**

೧. ನೆನೆಹಾಕಿದ ನವಣೆ ಅಕ್ಕಿಗೆ ಎಕ್ಕೆ ಹಾಲನ್ನು ಹಾಕಿ ರುಬ್ಬಿ ಉಗುರು ಸುತ್ತಾದ ಬೆರಳಿಗೆ ಕಟ್ಟಬೇಕು.

೨. ಸ್ವಲ್ಪ ಅರಿಶಿಣಪುಡಿಗೆ ಸ್ವಲ್ಪ ಸುಣ್ಣ ಸೇರಿಸಿ ನೀರಿನೊಡನೆ ಕಲಿಸಿ ಉಗುರು ಸುತ್ತಾಗಿರುವ ಜಾಗಕ್ಕೆ ಹಚ್ಚಿದರೆ ಕಡಿಮೆಯಾಗುತ್ತದೆ.

**ಇಸುಬಿಗೆ**

೧. ಹೊಂಗೆ ಎಣ್ಣೆಗೆ ಸಮಪ್ರಮಾಣದಲ್ಲಿ ನಿಂಬೆರಸ ಸೇರಿಸಿ ಇಸುಬಿನ ಗಾಯದ ಮೇಲೆ ಹಚ್ಚಿದರೆ ಇಸುಬು ಗುಣಮುಖವಾಗುತ್ತದೆ.

೨. ಮುತ್ತುಗದ ಎಲೆಯನ್ನು ಸುಟ್ಟು ಅದರ ಬೂದಿಗೆ ಎಳ್ಳೆಣ್ಣೆ ಸೇರಿಸಿ ಕಲಿಸಿ ಇಸುಬಿನ ಗಾಯಕ್ಕೆ ಹಚ್ಚಬೇಕು.

೩. ಬೇವಿನ ತೊಗಟೆ ಸುಟ್ಟು ಬೂದಿಯನ್ನು ಕೀವುಸೋರುತ್ತಿರುವ ಇಸುಬಿನ ಗಾಯದ ಮೇಲೆ ಹಚ್ಚಿದರೆ ಗಾಯದ ಹುಳುಗಳು ಬೀಳುವುದಿಲ್ಲ. ಬೇಗನೇ ವಾಸಿಯಾಗುತ್ತದೆ.

**ಮೂರ್ಚೆರೋಗ**

೧. ೧೦ಗ್ರಾಂ ಬೆಳ್ಳುಳ್ಳಿಗೆ ೨೦ ಗ್ರಾಂ ಕರಿಎಳ್ಳು ಸೇರಿಸಿ ಚೆನ್ನಾಗಿ ಅರೆದು ಪ್ರತಿದಿನ ಬೆಳಿಗ್ಗೆ ಸೇವಿಸುವುದರಿಂದ ದೀರ್ಘಕಾಲದವರೆಗೆ ಈ ಕಾಯಿಲೆಯು ಬರುವುದಿಲ್ಲ.

**ಸರ್ಪ ಸುತ್ತು**

ಮುತ್ತುಗದ ಪುರದ ತೊಗಟೆಯನ್ನು ಒಂದು ದಿವಸಕ್ಕೆ ಮೊದಲು ತಂದು (ಔಷಧಿ ಕೊಡುವ ಹಿಂದಿನ ದಿನ) ಜಜ್ಜಿ ನೀರಿನಲ್ಲಿ ಹಾಕಿಡಬೇಕು. ಮರುದಿನ ಬೆಳಿಗ್ಗೆ ಅರ್ಧಗ್ಲಾಸಿನಷ್ಟು ಔಷಧಿ ನೀರಿಗೆ (ತೊಗಟೆಯ ನೀರಿಗೆ) ಒಂದು ಲಿಂಬೆಹಣ್ಣಿನ ರಸವನ್ನು ಬೆರೆಸಿ ಕುಡಿಯಲು ಕೊಡಬೇಕು.

ಹೀಗೆ ದಿನದಲ್ಲಿ ಎರಡು ಬಾರಿ ಬೆಳಿಗ್ಗೆ ಹಾಗೂ ರಾತ್ರಿ ಕುಡಿಯಬೇಕು. ಹೀಗೇನೆ ಒಂದು ವಾರ (ಏಳುದಿನ) ಕುಡಿಯಬೇಕು.

ಸರ್ಪಸುತ್ತು ಆದ ಗಾಯದ ಮೇಲೆ ಮುತ್ತುಗದ ಮರದ ತೊಗಟೆಯನ್ನು ಲಿಂಬೆರಸದಲ್ಲಿ ತೇದಿ ಅಥವಾ ಅರೆದು ಹಚ್ಚಬೇಕು. ಮೊದಲನೆ ದಿನ ಮಾತ್ರ ೫ ಬಾರಿ ಗಾಯದ ಮೇಲೆ ಈ ಔಷಧಿಯನ್ನು ಸವರಬೇಕು. ನಂತರ ೨ನೇ ದಿನದಿಂದ ೨ ಬಾರಿ ಸವರಬೇಕು. ಹೀಗೆ ಏಳುದಿನ ಈ ಔಷಧಿಯನ್ನು ಹಚ್ಚಬೇಕು.

### ಮೂಲವ್ಯಾದಿ

ನಾಚಿಕೆಮುಳ್ಳಿನ ಬೇರು, ಜೀರಿಗೆಯನ್ನು ಸೇರಿಸಿ ಚೆನ್ನಾಗಿ ಕುಟ್ಟಿ ನೀರಿನಲ್ಲಿ ಆಕಿ ಕಾಯಿಸಬೇಕು. ಆರು ಗ್ಲಾಸ್ ನೀರನ್ನು ಹಾಕಿ ಕುದಿಸಿದರೆ ಒಂದು ಗ್ಲಾಸ್ ನೀರು ಆಗುವವರೆಗೆ ಕುದಿಸಬೇಕು. ನಂತರ ಆರಿಸಿ ಅದರಲ್ಲಿ ಆಕಳು ಹಾಲನ್ನು ಹಾಕಿ ಕುಡಿಯಬೇಕು. ದಿನಕ್ಕೆ ಎರಡು ಬಾರಿ ಬೆಳಗ್ಗೆ ಮತ್ತು ರಾತ್ರಿ ೩ ದಿನಗಳ ಕಾಲ ಕುಡಿಯಬೇಕು.

ಜೀರಿಗೆ, ಗಸಗಸೆ, ಒಣದ್ರಾಕ್ಷಿ, ಮೊಸರು ಇವಿಷ್ಟನ್ನು ಸೇರಿಸಿ ಅರೆದು ೫ ದಿನಗಳವರೆಗೆ ಕುಡಿಯಬೇಕು. ಹಾಗೂ ೫ ದಿನಗಳುವರೆಗೆ ಸಪ್ಪನ ಊಟ ಮಾಡಬೇಕು.

### ಅರ್ಧ ತಲೆನೋವು

ಈರುಳ್ಳಿಯನ್ನು ಸಣ್ಣದಾಗಿ ಕತ್ತರಿಸಿ ತುಪ್ಪದಲ್ಲಿ ಹಾಕಿ ಚೆನ್ನಾಗಿ ಕಾಯಿಸಿ ಇದರ ಜೊತೆಗೆ ನಿಂಬೆಗಿಡದ ಚಿಗುರಿದ ಎಲೆಯನ್ನು ಹಾಕಿ ಕಾಯಿಸಬೇಕು. ರಾತ್ರಿಯಲ್ಲಿ ಕಾಯಿಸಿ ಬೆಳಿಗ್ಗೆ ಏಳುವ ಮೊದಲು ಮೂಗಿಗೆ ೩ ಹನಿಗಳನ್ನು ಬಿಡಬೇಕು. (ಎದ್ದ ಹಾಸಿಗೆಯಲ್ಲಿಯೇ ಬಿಡಬೇಕು).

### ಸರ್ಪ ಸುತ್ತು

ಮದರಂಗಿ ಸೊಪ್ಪು (ಮೆಹಂದಿ ಸೊಪ್ಪು)ನ್ನು ಕಹಿಸುಳಿ (ಕಂಚಿ ಸುಳಿ)ರಸದಲ್ಲಿ ಮಿಶ್ರಮಾಡಿ ಅರಿಯಬೇಕು. (ನೀರನ್ನು ಮುಟ್ಟಿಸಬಾರದು) ಹಾಗೂ ಇದಕ್ಕೆ ಗಂಧ ಮತ್ತು ಕೆಂಪು ಗಂಧವನ್ನು ಕಹಿಸುಳಿ ರಸದಲ್ಲಿ ಅರೆದು ಮಿಶ್ರಮಾಡಿ ಕೋಳಿಗರಿಯಿಂದ ಸರ್ಪದ ಗಾಯಕ್ಕೆ ಹಚ್ಚಬೇಕು. (ಕೈಯಿಂದ ಹಚ್ಚಬಾರದು). ಈ ಔಷಧಿಯನ್ನು ಹಚ್ಚುವವರು ಮಡಿಯಾಗಿರಬೇಕು. ಈ ಔಷಧಿಯನ್ನು ದಿನದಲ್ಲಿ ೩ ಬಾರಿ ೩ ದಿನಗಳವರೆಗೆ ಹಚ್ಚಬೇಕು. ೩ ದಿನಗಳ ವರೆಗೆ ತೊಳೆಯಬಾರದು.

### ಹಲ್ಲುನೋವು

ಲಕ್ಕಿಸೊಪ್ಪನ್ನು ಕುಟ್ಟಿ ನೋವಾದ ಹಲ್ಲಿಗೆ ಹತ್ತಿಯಲ್ಲಿಡುವುದರಿಂದ ಹಲ್ಲು ನೋವು ಕಡಿಮೆಯಾಗುತ್ತದೆ.

ಮತ್ತಿ ಮರದ ಕೆಂಡದ ಮಸಿ ಮತ್ತು ಮಾವಿನ ಚಕ್ಕೆ, ಏಲಕ್ಕಿ ಪುಡಿ, ಕಾಳುಮೆಣಸು, ಉಪ್ಪನ್ನು ಸೇರಿಸಿ ಹಲನ್ನು ಹುಜ್ಜಬೇಕು.

### ಕಿವಿನೋವು

ಅಗ್ನಿಬಳ್ಳಿ ಎಲೆಯನ್ನು ಕೊಬ್ಬರಿ ಎಣ್ಣೆಯಲ್ಲಿ ಕುದಿಸಿ ರಾತ್ರಿ ಮಲಗುವ ಮುನ್ನ ಕಿವಿಯಲ್ಲಿ ಹಾಕಿಕೊಂಡು ಮಲಗಬೇಕು. ಹೀಗೆ ೨-೩ ದಿನ ಔಷಧಿಯನ್ನು ಹಾಕಿಕೊಳ್ಳುವುದರಿಂದ ಕಿವಿ ನೋವು ಕಡಿಮೆಯಾಗುತ್ತದೆ.

### ಕುರುವು

ಕುರುವು ಆದರೆ ಮದಗಣಕಿ ಎಲೆಗೆ ಕೊಬ್ಬರಿ ಎಣ್ಣೆಯನ್ನು ಹಚ್ಚಿ ಕಾಯಿಸಿ ಕುರುವಿಗೆ ಹಚ್ಚುವುದರಿಂದ ಕುರುವು ವಾಸಿಯಾಗುತ್ತದೆ.

**ಕಾಮಣಿ**

ಬೆಲ್ಲ ರೊಟ್ಟಿಯನ್ನು ಮಾತ್ರ ತಿನ್ನಬೇಕು. ಹಗಲಿನಲ್ಲಿ ಮಲಗಬಾರದು.

**ಲಕವಾ ಆದರೆ**

ಅಡವಿ ಪಾರಿವಾಳದ ಹಸಿ ರಕ್ತವನ್ನು ಕುಡಿಸಬೇಕು. ಒಂದು ತಿಂಗಳಿನಲ್ಲಿ ೨-೩ ಪಾರಿವಾಳದ ರಕ್ತವನ್ನು ೩ ತಿಂಗಳವರೆಗೆ ಕುಡಿಸುವುದರಿಂದ ಮೂರ್ಛೆರೋಗ ಕಡಿಮೆಯಾಗುತ್ತದೆ.

ಬೂದುಗುಂಬಳ ಕಾಯಿಯ ಪಲ್ಯಯನ್ನು ಸೇವಿಸುತ್ತಿದ್ದರೆ ಮೂರ್ಛೆರೋಗ ಕಡಿಮೆಯಾಗುತ್ತದೆ.

**ಕೇರಿನಿಂದಾದ ಗಾಯ (ಮಾವಿನ ಓಟೆ/ಕೇರು)**

೧. ಎಳ್ಳು ಮತ್ತು ಕರಿಯ ಮಣ್ಣು ಇವೆರಡನ್ನು ಅರೆದು ಕೇರಿನಿಂದಾದ ಗಾಯಕ್ಕೆ ಹಚ್ಚುವುದರಿಂದ ಉಂಟಾಗುವ ವಾತವು ಇಳಿದು ಗುಣವಾಗುತ್ತದೆ.

೨. ಎಳ್ಳನ್ನು ಹಾಲಿನೊಡನೆ ಅರೆದು ಹಚ್ಚುವುದರಿಂದಲೂ ಕೇರಿನಿಂದುಂಟಾಗುವ ವಿಕಾರವು ಶಾಂತವಾಗುತ್ತದೆ.

೩. ಎಳ್ಳನ್ನು ಹಾಲಿನೊಡನೆ ಅರೆದು ತುಪ್ಪ ಕೂಡಿಸಿ ಹಚ್ಚುವುದರಿಂದಲೂ ಕೇರಿನ ಸಂಪರ್ಕ ಕಡಿಮೆಯಾಗುತ್ತದೆ.

**ಸೊಪ್ಪುಗಳು, ತರಕಾರಿಗಳಿಂದ ಔಷಧ ತಯಾರಿಕೆ**

**ತಿರುಕಸಾಲೆ**

ಈ ಸೊಪ್ಪನ್ನು ಬೇಯಿಸಿ ಸ್ವಲ್ಪ ಉಪ್ಪು, ಮೆಣಸಿನ ಪುಡಿ ಮುಂತಾದವುಗಳನ್ನು ಹಾಕಿ ದಿನನಿತ್ಯ ತಿನ್ನುವುದರಿಂದ ಮೂತ್ರದಲ್ಲಿನ ಕಲ್ಲುರೋಗ ವಾಸಿಯಾಗುತ್ತದೆ.

**ಮೆಂತ್ಯೆ ಸೊಪ್ಪು**

ಮೆಂತ್ಯಾದ ಹಿಟ್ಟಿನ ಮುದ್ದೆಮಾಡಿ ಕುರುವುಗಳ ಮೇಲೆ ಕಟ್ಟಿದರೆ ಊತ ಮತ್ತು ನೋವು ಕಡಿಮೆಯಾಗುತ್ತದೆ.

**ಸಬ್ಬಸಿಗೆ ಸೊಪ್ಪು**

ಸಬ್ಬಸಿಗೆ ಬೀಜವನ್ನು ಹಿಪ್ಪೆಯ ಎಣ್ಣೆಯೊಡನೆ ಅರೆದು ಕೀಲುಗಳಿಗೆ ತಿಕ್ಕಿಸಿದರೆ ಕೀಲುನೋವು ಕಡಿಮೆಯಾಗುತ್ತದೆ.

**ಪುಂಡಿಸೊಪ್ಪು**

ಪುಂಡಿ ಚಟ್ನಿ ಮಾಡಿ ತಿನ್ನುವುದರಿಂದ ಮಲಬದ್ಧತೆಯು ನಿವಾರಣೆಯಾಗುತ್ತದೆ.

**ಹೀರೇಕಾಯಿ**

ಹೀರೆಗಿಡದ ಬೇರನ್ನು ಅರೆದು ಮೂಲವ್ಯಾದಿಯ ಮೊಳಕೆಗಳಿಗೆ ಹಚ್ಚುವುದರಿಂದ ಬಾಧೆಯು ಕಡಿಮೆಯಾಗುತ್ತದೆ.

**ಹಾಗಲಕಾಯಿ**

ಹಾಗಲಕಾಯಿ ಎಲೆಯ ರಸಕ್ಕೆ ಸ್ವಲ್ಪ ಮೊಸರು ಕೂಡಿಸಿ ಶರೀರಕ್ಕೆ ಹಚ್ಚಿ ಒಂದು ಗಂಟೆ ನಂತರ ಸ್ನಾನಮಾಡುದರಿಂದ ಮೈಮೇಲಿನ ಪೆಟ್ಟಾದ ಗಂಧೆಗಳು ಕಡಿಮೆಯಾಗುತ್ತವೆ.

**ಪಡವಲಕಾಯಿ**

ಎಲೆಯನ್ನು ನೀರಿನಲ್ಲಿ ಹಾಕಿ ಕುದಿಸಿ ಕಷಾಯ ಮಾಡಿ ಆರಿದ ನಂತರ ಸೈಂದದ ಲವಣ ಮತ್ತು ಹಿಪ್ಪಲಿಯ ಚೂರ್ಣವನ್ನು ಹಾಕಿ ಕುಡಿಯುವುದರಿಂದ ಜ್ವರವು ಕಡಿಮೆಯಾಗುತ್ತದೆ.

**ಬದನೆಕಾಯಿ**

ಬದನೆಕಾಯಿಯನ್ನು ಒಣಗಿಸಿ ಕುಟ್ಟಿ ಆ ಪುಡಿಯನ್ನು ಕೆಂಡದ ಮೇಲೆ ಹಾಕಿ ಹೊಗೆಯನ್ನು ಕಿವಿಗಳಿಗೆ ಸೇರಿಸಿದರೆ ಕಿವಿಯಲ್ಲಿ ಸೇರಿಕೊಂಡಿರುವ ಹುಳುಗಳು ಸಾಯುತ್ತವೆ. ಯಾವಾಗಲೂ ಕಿವಿಯು ಸೋರುತ್ತಿದ್ದರೆ ಇದು ತುಂಬಾ ಪ್ರಯೋಜನಕಾರಿ.

**ಬೂದುಗುಂಬಳಕಾಯಿ**

ಬೂದುಗುಂಬಳದ ಬೀಜ, ಸೌತೆಕಾಯಿ ಬೀಜ ಇವೆರಡನ್ನು ನೀರಿನೊಡನೆ ಅರೆದು ಕಿಬ್ಬೊಟ್ಟೆಗೆ ಹಚ್ಚಿದರೆ ಮೂತ್ರ ವಿಸರ್ಜನೆಯು ಆಯಾಸವಿಲ್ಲದೇ ಆಗುತ್ತದೆ.

**ಸೋರೆಕಾಯಿ**

ಸೋರೆಕಾಯಿಯ ರಸದಲ್ಲಿ ಕೊತ್ತಂಬರಿಯ ಬೀಜ, ಏಲಕ್ಕಿ, ಕಲ್ಲು ಸಕ್ಕರೆ ಇವುಗಳ ಕಷಾಯ ಮಾಡಿ ಕುಡಿದರೆ ವಾಂತಿ ಮತ್ತು ತಲೆ ತಿರುಗುವಿಕೆ ಕಡಿಮೆಯಾಗುತ್ತದೆ.

**ಮೂಲಂಗಿ**

ಮೂಲಂಗಿಯ ಬೀಜ, ನುಗ್ಗೆಕಾಯಿಯ ಬೀಜಗಳನ್ನು ಎಮ್ಮೆಯ ಮಜ್ಜಿಗೆಯಲ್ಲಿ ಅರೆದು ಹಚ್ಚುವುದರಿಂದ ಗಂಡಮಾಲೆ ಇತರ ಗಡ್ಡೆಗಳು ಕರಗುತ್ತವೆ.

**ಬೆಂಡೆಕಾಯಿ**

ಬೆಂಡೆಗಿಡದ ಬೇರು, ಬಾಳೆಯ ಎಲೆ ಎರಡನ್ನು ಅಕ್ಕಿ ತೊಳೆದ ನೀರಿನೊಡನೆ ಅರೆದು ಸೋಸಿ ಕುಡಿದರೆ ಬಿಳಿಸೆರಗು ಕೆಂಪುಸೆರಗು ನಿಲ್ಲುತ್ತದೆ.

**ಅವರೆಕಾಯಿ**

ಅವರೆ ಕಾಯಿಯನ್ನು ತಿನ್ನುವುದರಿಂದ ವಾಯು ಮತ್ತು ಪಿತ್ತವನ್ನು ತಗ್ಗಿಸುತ್ತದೆ.

**ಆಲೂಗಡ್ಡೆ**

ವಾತರೋಗ, ಕೀಲುಗಳ ನೋವು, ಬಾವುಗಳಿಗೆ ಮೇಲ್ಗೆಡೆಯಲ್ಲಿ ಆಲೂಗಡ್ಡೆಯನ್ನು ಬೇಯಿಸಿ ಕೈಯಿಂದ ಮುದ್ದೆ ಮಾಡಿ ಪಟ್ಟಿ ಕಟ್ಟುವುದರಿಂದ ಗುಣವಾಗುತ್ತದೆ.

**ಈರುಳ್ಳಿ**

ಹಸಿಯ ಈರುಳ್ಳಿಯನ್ನು ಕಾಲಿನ ಹಿಮ್ಮಡಿ ಸೀಳಿರುವುದಕ್ಕೆ ಕುಟ್ಟಿ ಕಟ್ಟಿದರೆ ವಾಸಿಯಾಗುತ್ತದೆ.

### ಬೆಳ್ಳುಳ್ಳಿ

ಬೆಳ್ಳುಳ್ಳಿ, ಕರಿಎಳ್ಳನ್ನು ಕೂಡಿಸಿ ಸೂರ್ಯೋದಯಕ್ಕೂ ಮುಂಚೆಯೇ ೨೧ ದಿನಗಳವರೆಗೆ ತಿನ್ನುವುದರಿಂದ ಮೂರ್ಛೆಯು ಗುಣವಾಗುತ್ತದೆ.

### ಹಣ್ಣುಗಳು

### ಮಾವಿನಹಣ್ಣು

ಮಾವಿನ ಕಾಯಿಯ ವಟ್ಟದೊಳಗಿನ ಬೀಜವನ್ನು ಗೋಮೂತ್ರ ಮತ್ತು ಸೈಂದದ ಲವಣದೊಡನೆ ಅರೆದು ಹಚ್ಚುತ್ತಿದ್ದರೆ ಕೂದಲು ಉದುರಿದಲ್ಲಿನ ಭಾಗದ ಹುಳುಗಳು ನಾಶವಾಗಿ ಕೂದಲು ಮತ್ತೇ ಹುಟ್ಟುತ್ತದೆ.

### ದಾಳಿಂಬೆ

ದಾಳಿಂಬೆಯ ಗಿಡದ ಬೇರನ್ನು ನೀರಿನೊಡನೆ ಅರೆದು ಹಣೆಗೆ ಹಚ್ಚುವುದರಿಂದ ತಲೆನೋವು ಕಡಿಮೆಯಾಗುತ್ತದೆ.

### ಬಾಳೆಹಣ್ಣು

ಬಾಳೆಹಣ್ಣನ್ನು ಸಕ್ಕರೆ ಜೇನು ತುಪ್ಪದೊಂದಿಗೆ ತಿನ್ನುತ್ತಿದ್ದರೆ ದಮ್ಮು ಕೆಮ್ಮು ಎದೆನೋವು ಕಡಿಮೆಯಾಗುತ್ತದೆ.

### ನೇರಳೆಹಣ್ಣು

ನೇರಳೆಯ ಹಣ್ಣಿನ ರಸವನ್ನು ಕುಡಿಯುವುದರಿಂದ ವಾಂತಿಯು ನಿಲ್ಲುತ್ತದೆ.

### ಅತ್ತಿಹಣ್ಣು

ಅತ್ತಿಯ ಹಣ್ಣನ್ನು ಜೇನುತಪ್ಪದೊಡನೆ ತಿನ್ನುವುದರಿಂದ ಮೂಗು, ಬಾಯಿ, ಮೂತ್ರದ್ವಾರ, ಮಲದ್ವಾರದಿಂದ ಬೀಳುವ ರಕ್ತವು ನಿಲ್ಲುತ್ತದೆ.

### ನಿಂಬೆಹಣ್ಣು

ನಿಂಬೆಯ ಎಲೆಗಳನ್ನು ಕುಟ್ಟಿ ರಸ ತೆಗೆದು ಜೇನುತುಪ್ಪವನ್ನು ಕಲಿಸಿ ಕುಡಿಯುವುದರಿಂದ ಹೊಟ್ಟೆಯಲ್ಲಿನ ಜಂತುಗಳು ಸಾಯುತ್ತವೆ.

### ಪಪ್ಪಾಯಿ ಹಣ್ಣು

ಪ್ರತಿದಿನ ಬೆಳಿಗ್ಗೆ ಈ ಹಣ್ಣನ್ನು ತಿನ್ನುವುದರಿಂದ ಮಲಬದ್ಧತೆಯು ನಾಶವಾಗುತ್ತದೆ.

### ಕಲ್ಲಂಗಡಿ ಹಣ್ಣು

ಕಲ್ಲಂಗಡಿ ಹಣ್ಣಿನ ರಸಕ್ಕೆ ಜೀರಿಗೆ, ಸಕ್ಕರೆಯನ್ನು ಕಲಿಸಿ ಕುಡಿಯುವುದರಿಂದ ತಡೆ ಹಿಡಿದಿದ್ದ ಮೂತ್ರವು ಹೊರಬೀಳುತ್ತದೆ.

# ಅಧ್ಯಾಯ ೪

# ಸ್ತ್ರೀವಾದಿ ಹಿನ್ನೆಲೆಯಲ್ಲಿ ನಾಟಿವೈದ್ಯ ಪದ್ಧತಿ

ಪ್ರಪಂಚದಲ್ಲಿ ಸ್ತ್ರೀ ಯಾವಾಗ ಹುಟ್ಟಿದಳೋ ಅಂದಿನಿಂದಲೂ ಸ್ತ್ರೀ ದೃಷ್ಟಿಕೋನದ ಚಿಂತನೆ ಇದ್ದಿರಬಹುದು. ಆದರೆ ಸ್ತ್ರೀವಾದ ಎಂಬ ಹೆಸರಿನಿಂದ ಸ್ತ್ರೀಪರ ನೆಲೆಯು ಚಾಲ್ತಿಗೆ ಬಂದಿರುವುದು ಪಾಶ್ಚಾತ್ಯ ಪ್ರಪಂಚದಲ್ಲಿ ಭಾರತದಲ್ಲಿಯೂ ಕೂಡ ಹಲವಾರು ವರ್ಷಗಳ ಹಿಂದಿನಿಂದಲೂ ಲಿಂಗಬೇಧ ನಿವಾರಣೆ, ಪಿತೃಪ್ರಧಾನ ವ್ಯವಸ್ಥೆಯಿಂದ ಸ್ತ್ರೀ ವಿಮೋಚನೆ, ಸ್ತ್ರೀ ಸಬಲೀಕರಣ, ಸ್ತ್ರೀ ಮೇಲಿನ ಹಿಂಸೆಯ ವಿರೋಧ ಮುಂತಾದ ಮುಖ್ಯ ಹಾಗೂ ಗಂಭೀರ ವಿಚಾರಗಳನ್ನು ಇಟ್ಟುಕೊಂಡು ಸ್ತ್ರೀವಾದವು ಹೋರಾಡುತ್ತಿದೆ. ಈ ಸ್ತ್ರೀವಾದವು ಮುಖ್ಯವಾಗಿ ವ್ಯವಸ್ಥೆಯಲ್ಲಿ ಇರುವಂತಹ ಲಿಂಗ ಅಸಮಾನತೆಯನ್ನು ತೊಡೆದುಹಾಕುವ ಕೆಲಸದಲ್ಲಿ ನಿರತವಾಗಿದೆ.

ಆಧುನೀಕರಣ, ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ವೈದ್ಯಕೀಯ ಚಿಕಿತ್ಸೆಗೆ ಸಂಬಂಧಿಸಿದಂತೆ ಆಧುನಿಕ ವೈದ್ಯಕೀಯ ಪದ್ಧತಿಯನ್ನು ಅಳವಡಿಸಿಕೊಳ್ಳದೇ ನಾಟಿವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತಿದೆ. ಮುಖ್ಯವಾಗಿ ಮಹಿಳೆಯರು ಈ ನಾಟಿವೈದ್ಯ ಪದ್ಧತಿಯ ಚಿಕಿತ್ಸಾ ಕ್ರಮದಲ್ಲಿ ಪ್ರಮುಖ ಪಾತ್ರವನ್ನು ವಹಿಸಿರುವುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ಈ ವೈದ್ಯ ಪದ್ಧತಿಯಲ್ಲಿನ ಇವರ ಪಾತ್ರ ಪ್ರತ್ಯಕ್ಷವಾಗಿಯೂ ಮತ್ತು ಪರೋಕ್ಷವಾಗಿಯೂ ಇರುವುದನ್ನು ನಾವು ಕಾಣಬಹುದಾಗಿದೆ. ಆದರೆ ಈ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರು ಆರ್ಥಿಕವಾಗಿ ಬಲಿಷ್ಟರಾಗಿದ್ದಾರೆಯೇ? ಇವರಿಗೆ ಸಿಗುತ್ತಿರುವಂತಹ ಸ್ಥಾನಮಾನಗಳಲ್ಲಿ ಬದಲಾವಣೆಗಳು ಏನಾದರೂ ಆಗಿದೆಯೇ? ಎಂಬುದನ್ನು ಗಮನಿಸಿದಾಗ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಏಕೆಂದರೆ ಪುರುಷಶಾಹಿ ಸಮಾಜ ವ್ಯವಸ್ಥೆಯಲ್ಲಿ ಮಹಿಳೆಯರ ಸ್ಥಾನ ತೀರ ಕೆಳಹಂತದಲ್ಲಿದ್ದು ಅವರಿಗೆ ಯಾವುದೇ ರೀತಿಯ ಉನ್ನತ ಸ್ಥಾನಮಾನಗಳು ದೊರೆಯುತ್ತಿಲ್ಲ. ಮುಖ್ಯವಾಗಿ ಈ ನಾಟಿ ವೈದ್ಯಪದ್ಧತಿಯ ಚಿಕಿತ್ಸೆ ನೀಡುವವರಲ್ಲಿ ಹೆಚ್ಚಾಗಿ ಪುರುಷರದೇ ಪ್ರಮುಖ ಪಾತ್ರವಿರುತ್ತದೆ. ಮಹಿಳೆಯು ಕೇವಲ ಸಹಾಯಕರಾಗಿ ಕೆಲಸ ಮಾಡುತ್ತಿರುವುದು ಕಂಡುಬರುತ್ತದೆ. ಈ ನಾಟಿವೈದ್ಯ

ಪದ್ಧತಿಯನ್ನು ಮಹಿಳೆಯರು ಒಂದು ವೃತ್ತಿಯನ್ನಾಗಿಸಿಕೊಂಡವರು ಕೆಲವರಾದರೆ, ಹವ್ಯಾಸವಾಗಿ ತೆಗೆದುಕೊಂಡವರು ಕೆಲವರು. ವೃತ್ತಿಯಾಗಿ ತೆಗೆದುಕೊಂಡವರು ಸಮಾಜದಲ್ಲಿ ಗುರುತಿಸಲ್ಪಡುತ್ತಾರೆ. ಆದರೆ ಈ ಪದ್ಧತಿಯನ್ನು ಹವ್ಯಾಸವಾಗಿ ತೆಗೆದುಕೊಂಡವರು ನೇರವಾಗಿ ಸಮಾಜದಲ್ಲಿ ಗುರುತಿಸಲ್ಪಡದೆ ಪುರುಷನ ಮುಖಾಂತರ ಗುರುತಿಸಲ್ಪಡುತ್ತಾರೆ. ಇಂತಹ ಸನ್ನಿವೇಶಗಳನ್ನು ನಾವು ಹಲವಾರು ಕಡೆ ಕಾಣಲಾಗುತ್ತಿದೆ. ಇಲ್ಲಿ ಮುಖ್ಯವಾಗಿ ಸಮಾಜದಲ್ಲಿ ನೇರವಾಗಿ ಗುರುತಿಸಿಕೊಂಡವರು ಸ್ವತಂತ್ರವಾಗಿ ಜೀವನ ನಡೆಸುತ್ತಿರುತ್ತಾರೆ, ಆದರೂ ಸಹ ಪುರುಷ ಮೌಲ್ಯಗಳ ಅಡಿಯಲ್ಲಿಯೇ ಗುರುತಿಸಲ್ಪಟ್ಟಿರುತ್ತಾರೆ. ಹಾಗೆಯೇ ಅವರ ಕಾರ್ಯಗಳೂ ಸಹ ಪುರುಷ ಮೌಲ್ಯಗಳ ಆದೇಶದಂತೆಯೇ ನಡೆಯುತ್ತಿರುತ್ತವೆ.

ಪುರುಷಪ್ರಧಾನ ಸಮಾಜದಲ್ಲಿ ಮಹಿಳೆಯ ವಿಷಯವನ್ನು ಪ್ರಸ್ತಾಪಿಸಬೇಕೆಂದರೆ ಪೂರ್ವ ತಯಾರಿಯೊಂದಿಗೇ ಆರಂಭಿಸಬೇಕಾಗುತ್ತದೆ. ಏಕೆಂದರೆ ಪುರುಷಶಾಹಿ ಮೌಲ್ಯಗಳ ವಿರುದ್ಧ ಹೋರಾಟಕ್ಕೆ ಇಳಿಯಬೇಕಾಗಿರುವುದರಿಂದ ಪೂರ್ವ ತಯಾರಿ ಅವಶ್ಯಕವಾಗಿದೆ ಎಂದು ಹೇಳಬಹುದಾಗಿದೆ. ಈ ಸಮಾಜದಲ್ಲಿ ಪುರುಷನೇ ಮುಖ್ಯ ಕೇಂದ್ರ. ಇಲ್ಲಿನ ಎಲ್ಲಾ ಆಗುಹೋಗುಗಳೂ ಅವನ ಮೂಗಿನ ನೇರಕ್ಕೆ ಮಾತ್ರ ಸರಿಹೊಂದುವಂತೆ ನಡೆಯುತ್ತವೆ. ಹೆಂಗಸಿನ ಬದುಕೂ ಕೂಡ ಈ ಪುರುಷ ಕೇಂದ್ರದ ಸುತ್ತಲೇ ಗಿರಕಿ ಹೊಡೆಯಬೇಕಾದ ಅನಿವಾರ್ಯವನ್ನು ಇಲ್ಲಿ ಹುಟ್ಟುಹಾಕಲಾಗಿದೆ. ಹಾಗೆಯೇ ಈ ನಾಟಿವೈದ್ಯ ಪದ್ಧತಿಯಲ್ಲಿಯೂ ಸಹ ಮಹಿಳೆ ಪುರುಷ ಕೇಂದ್ರಿತ ಮೌಲ್ಯಗಳಿಗೆ ಒಳಗಾಗಿರುವುದು ಕಂಡುಬರುತ್ತಿದೆ. ಈ ನಿಟ್ಟಿನಲ್ಲಿ ಈ ನಾಟಿವೈದ್ಯಪದ್ಧತಿ ಮತ್ತು ಮಹಿಳೆಯರು ಎಂಬ ವಿಷಯವನ್ನು ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಿಸುವುದು ಅನಿವಾರ್ಯವಾಗಿದೆ ಹಾಗೂ ಅವಶ್ಯವಾಗಿದೆಯೂ ಕೂಡ.

ಮಹಿಳೆಯ ಆರೋಗ್ಯ ಇಡೀ ಸಮುದಾಯದ ಆರೋಗ್ಯದ ಅಡಿಗಲ್ಲು. ಅಷ್ಟೇ ಅಲ್ಲದೇ ಸ್ತ್ರೀಯರ ಆರೋಗ್ಯ, ಆಯಾ ಸಮಾಜದ ಒಟ್ಟು ಆರೋಗ್ಯಕ್ಕೆ ಹಿಡಿದ ಕೈಗನ್ನಡಿಯನ್ನಬಹುದು. ಈ ಹೇಳಿಕೆಯನ್ನು ವಿಶ್ವ ಆರೋಗ್ಯ ಸಂಸ್ಥೆಯನ್ನು ಒಳಗೊಂಡಂತೆ ವಿಶ್ವಸಂಸ್ಥೆಯ ಹಲವಾರು ಅಂಗಸಂಸ್ಥೆಗಳ ವರದಿಗಳು, ಜನಗಣತಿಯ ವರದಿಗಳು ಹಾಗೂ ಪ್ರಪಂಚದ ಅನೇಕ ದೇಶಗಳಲ್ಲಿ ನಡೆದಿರುವ ಹಾಗೂ ನಡೆಯುತ್ತಿರುವ ಸಂಶೋಧನಾ ವರದಿಗಳು ಸ್ಪಷ್ಟಪಡಿಸಿವೆ. ಸ್ತ್ರೀಯರು ಇಡೀ ಮನುಕುಲದ ಅರ್ಧಭಾಗವಾಗಿದ್ದು ಮುಂದಿನ ಮನುಕುಲದ ಸಂತತಿ ಆರೋಗ್ಯವಾಗಿ ಹುಟ್ಟುವುದು ಮತ್ತು ಹೀಗೆ ಬದುಕಿ ಉಳಿದ ಶಿಶುಗಳ ಆರೋಗ್ಯ ಬಹುಮಟ್ಟಿಗೆ ಸ್ತ್ರೀಯರ ಸಂಪೂರ್ಣ ಆರೋಗ್ಯ ಪರಿಸ್ಥಿತಿಯ ಮೇಲೆ ಅವಲಂಬಿತವಾಗಿದೆ. ಮಹಿಳೆ ಅನಾದಿಕಾಲದಿಂದ ಎಲ್ಲಾ ಸಮಾಜಗಳಲ್ಲೂ ಬರಿಯ ಸಂತಾನೋತ್ಪತ್ತಿ ಕಾರ್ಯವನ್ನಷ್ಟೇ ಅಲ್ಲದೆ, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಆಯಾ ಸಮಾಜದ ಸಂಪತ್ತಿನ ಉದಯಕ್ಕಾಗಿಯೂ ಪುರುಷರಿಗೆ ಹೆಗಲೆಣೆಯಾಗಿ ಕೆಲವೊಮ್ಮೆ ಪುರುಷರಿಗಿಂತಾ ಹೆಚ್ಚಿನ ಕೊಡುಗೆಯನ್ನು ನೀಡುತ್ತಾ ಬಂದಿದ್ದಾಳೆ. ಈ ನಿಟ್ಟಿನಲ್ಲಿ ನಾಟಿ ವೈದ್ಯ ಪದ್ಧತಿಯಲ್ಲಿಯೂ ಸಹ ತನ್ನದೇ ಆದ ಕೊಡುಗೆಯನ್ನು ನೀಡುತ್ತಿದ್ದಾಳೆ. ಇಲ್ಲಿ ಮುಖ್ಯವಾಗಿ ನಾಟಿ ವೈದ್ಯಪದ್ಧತಿಯ ಚಿಕಿತ್ಸೆಯನ್ನು ನೀಡುವವರು ಮತ್ತು ಈ ಚಿಕಿತ್ಸೆಯನ್ನು ಪಡೆಯುತ್ತಿರುವವರು ಎಂದು ಎರಡು ವಿಧದಲ್ಲಿ

ವಿಂಗಡಿಸಿಕೊಳ್ಳಬಹುದಾಗಿದೆ. ಇದರ ಮೂಲಕ ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಣೆಯನ್ನು ಮಾಡಬೇಕಾಗುತ್ತದೆ.

ಗ್ರಾಮೀಣ ಭಾಗದಲ್ಲಿ ಹೆಚ್ಚಾಗಿ ಕಂಡುಬರುವ ಈ ನಾಟಿ ವೈದ್ಯಪದ್ಧತಿಯು ಈ ಹಿಂದೆಯೇ ಹೇಳಿದಂತೆ ಪುರುಷರಿಂದಲೇ ಆವಿಷ್ಕಾರಗೊಂಡಿರುವುದಾಗಿದೆ. ತದನಂತರ ಈ ಪದ್ಧತಿಗೆ ಧರ್ಮದ ಲೇಪನವನ್ನು ಮಾಡಲಾಯಿತು. ಅಂದರೆ ಧರ್ಮದ ಮೌಲ್ಯಗಳ ಹೆಸರಿನಲ್ಲಿ ಹಲವಾರು ಪದ್ಧತಿ, ಆಚರಣೆಗಳನ್ನು ಜಾರಿಗೆ ತಂದು ಅವುಗಳಿಗೆ ಮಹಿಳೆಯರು ಒಳಗಾಗುವಂತೆ ಮಾಡಲಾಯಿತು. ಇಲ್ಲಿ ನಾಟಿವೈದ್ಯ ಪದ್ಧತಿಯನ್ನು ನೀಡುವವರಲ್ಲಿ ಎರಡು ಭಾಗಗಳನ್ನಾಗಿ ವಿಂಗಡಿಸಬಹುದಾಗಿದೆ. ಮೊದಲನೆಯದಾಗಿ ಈ ಪದ್ಧತಿಯನ್ನು ಒಂದು ವೃತ್ತಿಯನ್ನಾಗಿಸಿಕೊಂಡ ಮಹಿಳೆಯರು ಮತ್ತು ಎರಡನೆಯದಾಗಿ ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರು. ಇವೆರಡನ್ನು ಈ ಹಿಂದಿನ ಅಧ್ಯಾಯದಲ್ಲಿ ಸಂಪೂರ್ಣವಾಗಿ ವಿವರಿಸಲಾಗಿದೆ. ಆದರೆ ಇಲ್ಲಿ ಇವರನ್ನು ಕುರಿತು ಸ್ತ್ರೀವಾದಿ ನೆಲೆಯಲ್ಲಿ ವಿಶ್ಲೇಷಿಸಲಾಗುತ್ತದೆ. ಈ ನಿಟ್ಟಿನಲ್ಲಿ ಒಂದು ವೃತ್ತಿಯನ್ನಾಗಿಸಿಕೊಂಡವರು ಒಂದು ಚೌಕಟ್ಟಿನಡಿಯಲ್ಲಿ ತಮ್ಮ ಕೆಲಸವನ್ನು ನಿರ್ವಹಿಸುತ್ತಿದ್ದಾರೆ. ಇವರು ಈ ಪದ್ಧತಿಯ ಚಿಕಿತ್ಸಾ ಕ್ರಮಗಳನ್ನು ತಮ್ಮ ಹಿರಿಯರಿಂದ ಬಳುವಳಿಯಾಗಿ ಪಡೆದುಕೊಂಡಿರುತ್ತಾರೆ. ಅವರ ನಿರ್ದೇಶನದಂತೆಯೇ ಮುಂದುವರೆಯುತ್ತಿರುತ್ತಾರೆ. ಇಲ್ಲಿ ಅವರ ಹಿರಿಯರು ಯಾರಾಗಿರುತ್ತಾರೆಂದರೆ ಅವರು ಪುರುಷರೇ ಆಗಿರುತ್ತಾರೆ. ಮೊದಮೊದಲು ಈ ಪದ್ಧತಿಯನ್ನು ವೃತ್ತಿಯನ್ನಾಗಿಸಿಕೊಂಡ ಮಹಿಳೆಯರು ಮೂಲತಃ ಇದನ್ನೇ ಅವಲಂಬಿಸಿರುವುದಿಲ್ಲ. ಬದಲಾಗಿ ಪುರುಷರಿಗೆ ಸಹಾಯಕಳಂತೆ ಹಲವಾರು ವರ್ಷಗಳ ಕಾಲ ಕಾರ್ಯ ನಿರ್ವಹಿಸುತ್ತಿರುತ್ತಾಳೆ.

ಅವಳು ಮನೆಯಿಂದ ಹೊರಹೋಗಿ ದುಡಿಮೆಯಲ್ಲಿ ತೊಡಗಿಕೊಂಡಿರುವುದಿಲ್ಲ. ಬದಲಾಗಿ ಮನೆಯ ಮತ್ತು ಪುರುಷರಿಗೆ ಬೇಕಾದ ಕೆಲಸಗಳಲ್ಲಿ ತೊಡಗಿಕೊಂಡಿರುತ್ತಾಳೆ. ಅವಳಿಗೆ ಹೊರಗಡೆ ಹೋಗಿ ದುಡಿಯಲು ಸಾಧ್ಯವಾಗುವುದಿಲ್ಲ. ಇಂತಹ ಸಂದರ್ಭದಲ್ಲಿ ಆಕೆಯ ಪತಿ ಮರಣ ಹೊಂದಿದರೆ ಅನಿವಾರ್ಯವಾಗಿ ಈ ಪದ್ಧತಿಯನ್ನು ಮುಂದುವರೆಸಿಕೊಂಡು ಹೋಗಬೇಕಾಗುತ್ತದೆ. ಮತ್ತು ಅದರಿಂದಲೇ ಜೀವನ ಸಾಗಿಸಿಬೇಕಾಗಿರುತ್ತದೆ. ಇಲ್ಲಿ ಅವರು ಈ ಪದ್ಧತಿಯನ್ನು ಒಂದು ವೃತ್ತಿಯನ್ನಾಗಿಸಿಕೊಂಡುಬಿಡುತ್ತಾರೆ. ಬದುಕಿನ ಅನಿವಾರ್ಯತೆಗಾಗಿ ಇದು ಅಗತ್ಯವಾಗಿರುತ್ತದೆ. ಕೆಲವು ಸಂದರ್ಭದಲ್ಲಿ ಒಂದು ಕುಟುಂಬದಲ್ಲಿ ವಂಶಪಾರಂಪರ್ಯವಾಗಿ ಮಹಿಳೆಯರೇ ಈ ಪದ್ಧತಿಯನ್ನು ಅನುಸರಿಸುತ್ತಾ ಬಂದಿರುವ ವರದಿಗಳು ನಮಗೆ ದೊರೆಯುತ್ತವೆ. ಆದರೆ ಇವರು ಪುರುಷಶಾಹಿ ಮೌಲ್ಯಗಳ ಕೆಂಗಣ್ಣಿನಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಇಡೀ ವ್ಯವಸ್ಥೆಯ ಮೌಲ್ಯಗಳೆಲ್ಲವೂ ಸಹ ಪುರುಷನ ಚಿಂತನೆಗಳಿಗೆ ಅನುಗುಣವಾಗಿ ರೂಪಿತವಾಗಿರುವುದರಿಂದ ಇಲ್ಲಿ ಮಹಿಳೆಗೆ ಸಿಗಬೇಕಾದ ಸ್ಥಾನಮಾನಗಳು ದೊರೆಯದೇ ಪುರುಷನ ಅಧೀನ ನೆಲೆಯಲ್ಲಿಯೇ ಬಿಂಬಿಸಲ್ಪಡುತ್ತಾಳೆ. ಹಾಗೆಯೇ ಈ ಪದ್ಧತಿಯನ್ನು ಒಂದು ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರೂ ಕಂಡುಬರುತ್ತಾರೆ. ಇವರು ಹೆಚ್ಚಿನ ಶ್ರಮವನ್ನು ವಹಿಸುತ್ತಿರುತ್ತಾರೆ. ಇವರಿಗೆ ಈ ವೃತ್ತಿಯ ಬದಲಾಗಿ

ಬೇರೆ ಬೇರೆ ಕೆಲಸಗಳಲ್ಲಿ ಭಾಗಿಗಳಾಗಿರುತ್ತಾರೆ. ಇವರೂ ಸಹ ಪುರುಷಶಾಹಿ ಮೌಲ್ಯಗಳಿಗೆ ಅನುಗುಣವಾಗಿ ಕಾರ್ಯದಲ್ಲಿ ತೊಡಗಿರುತ್ತಾರೆ. ಹವ್ಯಾಸವಾಗಿ ತೆಗೆದುಕೊಂಡ ಈ ಮಹಿಳೆಯರಿಗೆ ಕೆಲಸದ ಒತ್ತಡಗಳು ತುಂಬಾ ಇರುತ್ತವೆ. ಅಂದರೆ ಮನೆಯಲ್ಲಿನ ಕೆಲಸದ ಜೊತೆಗೆ ವೈದ್ಯಪದ್ಧತಿಯನ್ನು ಮಾಡುವುದರ ಜೊತೆಗೆ ಮನೆಯಿಂದ ಹೊರಹೋಗಿ ದುಡಿಮೆಯಲ್ಲಿ ತೊಡಗಿಕೊಂಡಿರುತ್ತಾಳೆ. ಹಾಗಾಗಿ ಇವರಿಗೆ ಕೆಲಸಗಳ ಒತ್ತಡಗಳು ಹೆಚ್ಚಾಗಿರುತ್ತವೆ. ಇವರು ಒಂದು ರೀತಿಯ ಆತಂಕದ ಜೀವನವನ್ನು ನಡೆಸುತ್ತಿರುತ್ತಾರೆ. ಮತ್ತು ಇವರಿಗೆ ಬಿಡುವು ಎಂಬುದೇ ಇರುವುದಿಲ್ಲ. ಹೀಗೆ ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರು ಕಂಡುಬರುತ್ತಾರೆ.

ಇನ್ನು ಈ ನಾಟಿ ವೈದ್ಯ ಪದ್ಧತಿಯ ಚಿಕಿತ್ಸೆಗೆ ಒಳಪಡುವವರು ಅಥವಾ ಈ ಚಿಕಿತ್ಸೆಯನ್ನು ಅನುಸರಿಸುವವರು ಹೆಚ್ಚಾಗಿ ಗ್ರಾಮೀಣ ಭಾಗದಲ್ಲಿಯೇ ಕಂಡುಬರುತ್ತಾರೆ. ನಗರಗಳಿಂದ ದೂರ ಇರುವಂತಹ ಅಥವಾ ಯಾವುದೇ ಸಾರಿಗೆ ಸೌಕರ್ಯಗಳು ಇರದಂತಹ ಊರುಗಳಲ್ಲಿ ಈ ಪದ್ಧತಿಗೆ ಒಳಪಡುವವರು ಕಂಡುಬರುತ್ತಾರೆ. ಇತ್ತೀಚಿಗೆ ನಗರಪ್ರದೇಶದಲ್ಲಿ ವಾಸಿಸುತ್ತಿರುವ ಜನರು ಅಂದರೆ ನಾಗರೀಕರು ಎಂದು ಕರೆಸಿಕೊಳ್ಳುತ್ತಿರುವ ಜನರೂ ಸಹ ಈ ನಾಟಿವೈದ್ಯ ಪದ್ಧತಿಗೆ ಒಳಪಡುತ್ತಿರುವುದು ಕಂಡುಬರುತ್ತದೆ. ಗ್ರಾಮೀಣ ಭಾಗದಲ್ಲಿ ಮಹಿಳೆಯರು ಆರೋಗ್ಯಕ್ಕೆ ಸಂಬಂಧಿಸಿದಂತೆ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುತ್ತಾರೆ. ಅಂದರೆ ಮುಟ್ಟಿನ ಸಮಸ್ಯೆ, ಮಕ್ಕಳಾಗದೇ ಇರುವುದು, ಕಾಮಾಲೆ ರೋಗ, ಈ ತರಹದ ಹಲವಾರು ಕಾಯಿಲೆಗಳಿಗೆ ಒಳಗಾಗಿರುತ್ತಾರೆ. ಸಾಮಾನ್ಯ ಕಾಯಿಲೆಗಳಿಂದ ಹಿಡಿದು ಬಲಿಷ್ಟ ಅಥವಾ ದೊಡ್ಡದೊಡ್ಡ ಕಾಯಿಲೆಗಳವರೆಗೆ ಎಲ್ಲಾ ರೋಗಗಳಿಗೆ ತುತ್ತಾಗಿರುತ್ತಾರೆ. ಈ ರೋಗಗಳನ್ನು ವಾಸಿಮಾಡಲು ತಮ್ಮದೇ ಆದ ಪದ್ಧತಿಯನ್ನು ಅನುಸರಿಸುತ್ತಿರುತ್ತಾರೆ.

ಪುರುಷನು ಮಹಿಳೆಯನ್ನು ತನ್ನ ಅಧೀನದಲ್ಲಿರಿಸಿಕೊಳ್ಳಲು ನಾನಾ ವಿಧದ ತಂತ್ರಗಳನ್ನು ಹೂಡುತ್ತಾನೆ. ಎಲ್ಲಾ ವಲಯಗಳಲ್ಲೂ ಸಹ ತನ್ನ ಅಧಿಕಾರವನ್ನು ಚಲಾಯಿಸುತ್ತಾನೆ. ಅದೇ ರೀತಿಯಲ್ಲಿ ಈ ವೈದ್ಯಪದ್ಧತಿಯಲ್ಲಿಯೂ ಸಹ ತನ್ನ ಕೈವಾಡವನ್ನು ಮೆರೆದಿರುವುದು ಕಂಡುಬರುತ್ತಿದೆ. ಏಕೆಂದರೆ ಗ್ರಾಮೀಣ ಭಾಗದಲ್ಲಿನ ಮಹಿಳೆಯರು ಬಹಳಷ್ಟು ಮಟ್ಟಿಗೆ ಅನಕ್ಷರಸ್ಥರಾಗಿರುತ್ತಾರೆ. ಇವರು ಯಾವುದೇ ವಿಷಯವಾಗಿರಲಿ ಅದರ ಬಗ್ಗೆ ಗಂಭೀರವಾಗಿ ಯೋಚನೆಯನ್ನು ಮಾಡುವುದಿಲ್ಲ. ಬದಲಾಗಿ ಪುರುಷರು ಹೇಳಿದ ಹಾಗೆ ಕೇಳಿಕೊಂಡಿರುತ್ತಾರೆ. ಇದರಿಂದಾಗಿ ಹಲವಾರು ಕೆಟ್ಟ ಕೆಟ್ಟ ಆಚರಣೆಗಳಿಗೆ ಬಲಿಯಾಗುತ್ತಿರುತ್ತಾರೆ. ಹಾಗೆಯೇ ಈ ನಾಟಿವೈದ್ಯ ಪದ್ಧತಿಯಲ್ಲಿಯೂ ಸಹ ಹಲವಾರು ನಂಬಿಕೆಗಳಿಗೆ ಮಹಿಳೆಯರೇ ಒಳಗಾಗುವುದನ್ನು ನಾವು ಕಾಣುತ್ತೇವೆ. ಉದಾಹರಣೆಗೆ ಮಹಿಳೆಗೆ ಮಕ್ಕಳಾಗಲಿಲ್ಲವೆಂದು ನಾನಾವಿಧದ ನಾಟಿ ಔಷಧಗಳನ್ನು ಉಪಯೋಗಿಸುತ್ತಿರುತ್ತಾರೆ. ಇದರ ಜೊತೆಗೆ ದೇವಸ್ಥಾನಗಳಿಗೆ ನಡೆದುಕೊಳ್ಳುವುದು, ಹರಕೆ ಹೊತ್ತುಕೊಳ್ಳುವುದು, ಉಪವಾಸವಿರುವುದು ಈ ತರಹದ ಆಚರಣೆಗಳಿಗೆ ಮಹಿಳೆಯನ್ನೇ ನೇಮಿಸಿಕೊಳ್ಳುತ್ತಾರೆ. ಆದರೆ ಪುರುಷರಿಗೆ ಇವುಗಳು ಯಾವುವೂ ಅನ್ವಯಿಸುವುದಿಲ್ಲ. ಏಕೆಂದರೆ ಮಕ್ಕಳಾಗಲಿಲ್ಲವೆಂದರೆ ಅದಕ್ಕೆ ಮಹಿಳೆಯನ್ನೇ ದೂಷಿಸುತ್ತಾರೆಯೇ ಹೊರತು ಪುರುಷನನ್ನಲ್ಲ. ಮಕ್ಕಳಾಗದಿರುವುದಕ್ಕೆ ಪುರುಷನಲ್ಲಿಯೇ ಲೋಪವಿದ್ದರೂ ಸಹ ಅದನ್ನು ಮುಚ್ಚಿಹಾಕಿ ಮಹಿಳೆಯನ್ನೇ

ಆರೋಪಿಸ್ಥಾನದಲ್ಲಿ ನಿಲ್ಲಿಸುತ್ತಾರೆ. ಹಾಗಾಗಿ ಮಹಿಳೆ ಸಮಾಜದಿಂದ ಕುಟುಂಬದಿಂದ ಹಲವಾರು ಬೈಗುಳಗಳಿಗೆ, ನಿಂದನೆಗಳಿಗೆ ಒಳಗಾಗುತ್ತಾಳೆ. ಈ ಎಲ್ಲಾ ನಿಂದನೆಗಳಿಂದ ತಪ್ಪಿಸಿಕೊಳ್ಳಲು ಮಹಿಳೆ ಅನಿವಾರ್ಯವಾಗಿ ಆಚರಣೆಗಳಿಗೆ, ನಾಟಿ ವೈದ್ಯಪದ್ಧತಿಗೆ ಮೊರೆಹೋಗುತ್ತಾಳೆ. ಈ ನಾಟಿ ಔಷಧದಿಂದ ಫಲಕಾರಿಯಾದ ಫಲಿತಾಂಶ ದೊರೆಯಬಹುದು ಅಥವಾ ದೊರೆಯದೇ ಇರಬಹುದು. ಆದರೆ ಪ್ರಯತ್ನ ಮಾತ್ರ ನಿರಂತರವಾಗಿರುತ್ತದೆ. ಇವರು ಯಾರೂ ಸಹ ಆಧುನಿಕ ವೈದ್ಯಕೀಯ ಚಿಕಿತ್ಸೆಗೆ ಒಳಪಡುವುದಿಲ್ಲ. ಏಕೆಂದರೆ ಈ ಚಿಕಿತ್ಸೆಯಿಂದ ಯಾರಲ್ಲಿ ಲೋಪವಿದೆ ಎಂಬುದು ತಿಳಿದುಬಿಡುತ್ತದೆ. ಒಂದು ವೇಳೆ ಪುರುಷನಲ್ಲಿ ಲೋಪಕಂಡುಬಂದರೆ ಇದು ಅವನಿಗೆ ಅವಮಾನಕರ ಸಂಗತಿಯಾಗಿಬಿಡುತ್ತದೆ. ಹಾಗಾಗಿ ಈ ನಾಟಿ ವೈದ್ಯಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗುತ್ತದೆ.

ಈ ನಾಟಿ ವೈದ್ಯಪದ್ಧತಿಯನ್ನು ಒಂದು ವೃತ್ತಿಯನ್ನಾಗಿಸಿಕೊಂಡವರದು ಅಥವಾ ಈ ಪದ್ಧತಿಯನ್ನು ಹವ್ಯಾಸವಾಗಿ ತೆಗೆದುಕೊಂಡವರದು ಒಂದು ವಿಧದಲ್ಲಿ ಇದು ದುಡಿಮೆಯೇ ಆಗಿರುತ್ತದೆ. ಆದರೆ ಸಮಾಜ ವ್ಯವಸ್ಥೆ ಇದನ್ನು ದುಡಿಮೆ ಎಂದು ಪರಿಗಣಿಸುವುದಿಲ್ಲ. ಬದಲಾಗಿ ಇದು ಅವಳ ಕರ್ತವ್ಯ ಎಂಬುದಾಗಿ ಬಿಂಬಿಸುತ್ತದೆ. ನಮ್ಮ ಸಂಸ್ಕೃತಿಯಲ್ಲಿ ಬದುಕು ಮತ್ತು ದುಡಿಮೆಗಳನ್ನು ಸಮೀಕರಿಸುವ ಚಿಂತನೆ ಅತ್ಯಂತ ಗಾಢವಾಗಿದೆ. ಯಾವ ಪ್ರಾಣಿಯಾದರೂ, ಪಕ್ಷಿಯಾದರೂ ಬದುಕುಳಿಯುವ ಅಗತ್ಯಕ್ಕಾಗಿಯಾದರೂ ದುಡಿಯಲೇಬೇಕು. ಆದರೆ ದುಡಿದವರೆಲ್ಲರೂ ಬದುಕುಳಿಯುತ್ತಾರೆಂದಲ್ಲ. ಸಮಾಜ ಎಂಬ ವ್ಯವಸ್ಥೆಯೊಂದು ಜಾರಿಗೊಂಡಾಗಿನಿಂದ ಬದುಕಲು ಅಗತ್ಯವಾದ ಸಂಗತಿ ದುಡಿಮೆಯಲ್ಲ. ಬದಲಾಗಿ ದುಡಿಯಬಲ್ಲವರ ಮೇಲೆ ಸ್ಥಾಪಿಸಿ ಚಲಾಯಿಸಬಹುದಾದ ಅಧಿಕಾರ ಬಲ ಹಾಗೂ ಯಜಮಾನಿಕೆಗಳು ಎಂಬುದೇ ಖಚಿತವಾಗುತ್ತದೆ. ಹಾಗಾಗಿಯೇ ಈ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದಂತೆ ದುಡಿಮೆಯ ವ್ಯಾಖ್ಯಾನವೇ ಬದಲಾಗಿಬಿಟ್ಟಿದೆ. ಈಗ "ದುಡಿಮೆ" ಎಂದರೆ "ಪರಿಶ್ರಮ ಅಥವಾ ಕೆಲಸ" ಎಂಬ ಅರ್ಥದಿಂದ ಈ ವ್ಯಾಖ್ಯಾನ ಹೊರತಾಗಿಬಿಟ್ಟಿದೆ. ಇದಕ್ಕೀಗ "ಸಂಪಾದನೆ" "ಗಳಿಕೆ" ಎಂಬ ಅರ್ಥಗಳೇ ಇರುವುದು. ಈ ಸಂಪಾದನೆ ಗಳಿಕೆಗಳು ಕೆಲಸ ಮಾಡದೆಯೂ ಲಭ್ಯವಾಗಬಹುದು. ಹಾಗಾಗಿ ಇಲ್ಲಿ ದುಡಿಮೆ ಎಂಬುದು ಉತ್ಪಾದಕತೆಯೊಂದಿಗೆ ನೇರವಾಗಿ ತಳುಕು ಹಾಕಿಕೊಳ್ಳುತ್ತದೆ. ಇಲ್ಲಿ ಉತ್ಪಾದಕತೆಯ ವ್ಯಾಖ್ಯಾನವೂ ಕೂಡ ಭಿನ್ನವಾಗುತ್ತದೆ. ಅಧಿಕಾರ ಸಂರಚನೆಯಲ್ಲಿ ಯಜಮಾನ ಸ್ಥಾನದಲ್ಲಿ ಇದ್ದಾಗ ಮಾತ್ರ ಸಂಪಾದನೆ, ಗಳಿಕೆಗಳು ಸಂದಾಯವಾಗುತ್ತವೆ. ಆದರೆ ಮಹಿಳೆಯರು ಈ ಯಜಮಾನ ಸ್ಥಾನದಲ್ಲಿ ಕಂಡುಬರುವುದಿಲ್ಲ. ಬದಲಾಗಿ ದಾಸ್ಯದ ಜೀವನವನ್ನು ಸಾಗಿಸುವವರಾಗಿದ್ದಾರೆ. ಇಲ್ಲಿ ಮುಖ್ಯವಾಗಿ ನಾಟಿ ಔಷಧಿ ಪದ್ಧತಿಯನ್ನು ನೀಡುವವರದು ಒಂದು ದುಡಿಮೆಯೇ ಸರಿ. ಆದರೆ ಪುರುಷಶಾಹಿ ಮೌಲ್ಯಗಳು ಇದನ್ನು ದುಡಿಮೆಯೆಂದು ಪರಿಗಣಿಸುವುದಿಲ್ಲ. ಈ ಔಷಧಿ ಪದ್ಧತಿಯಿಂದಾಗಿ ಮಹಿಳೆಯರು ಸಂಪಾದನೆ ಮಾಡುತ್ತಾರೆ ನಿಜ. ಆದರೆ ಇದನ್ನು ಪುರುಷರು ಸಹಿಸಿಕೊಳ್ಳುವುದಿಲ್ಲ. ಹಾಗಾಗಿ ಇದನ್ನು ಅವರ ಕರ್ತವ್ಯ ಎಂದು ಬಣ್ಣಿಸುತ್ತಾರೆ. ಸರ್ವೇ ಸಾಮಾನ್ಯವಾಗಿ ದುಡಿಮೆ ಎಂಬುದಕ್ಕಿರುವ ವ್ಯಾಖ್ಯಾನಗಳು ಏನೇ ಇರಲಿ ಮಹಿಳೆಯ ಸಂದರ್ಭದಲ್ಲಿ ಮಾತ್ರ ದುಡಿಮೆಯನ್ನು ಆರ್ಥಿಕತೆಯಿಂದ ಬೇರ್ಪಡಿಸಿ ಬಿಡಲಾಗುತ್ತದೆ ಎಂಬುದು ಬಹಳ ಮುಖ್ಯವಾದ ಸಂಗತಿಯಾಗಿದೆ.

ಮಹಿಳೆಯ ದುಡಿಮೆ ವಾಸ್ತವದಲ್ಲಿ ಉತ್ಪಾದಕ ಗುಣವನ್ನೇ ಹೊಂದಿರುವಾಗಲೂ, ಉತ್ಪಾದಕತೆಯ ವ್ಯಾಖ್ಯಾನವನ್ನೇ ತಿರುಚಿಬಿಡಲಾಗುತ್ತದೆ. ಕುಟುಂಬದಲ್ಲಿ ಅವಳ ದುಡಿಮೆ ಕರ್ತವ್ಯಗಳು ಹೇಗೆ ಇರತಕ್ಕದ್ದು ಎಂಬುದಕ್ಕೆ ಖಚಿತ ನಿರ್ದೇಶನಗಳೇ ಇವೆ. "ಕಾರ್ಯೇಷು ದಾಸಿ, ಕರುಣೇಷು ಮಂತ್ರಿ, ಶಯನೇಷು ವೇಶ್ಯಾ, ರೂಪೇಶು ಲಕ್ಷ್ಮೀ, ಭೋಜ್ಯೇಷು ಮಾತಾ, ಕ್ಷಮಯಾ ಧರಿತ್ರೀ ಷಾಡ್ಗುಣ್ಯ ಲಕ್ಷ್ಮೀ ಕುಲಂ ಉದ್ಧರಂಲೇ" ಎಂಬ ಪ್ರಖ್ಯಾತ ಶ್ಲೋಕದಲ್ಲಿ ಮಂತ್ರಿಯ ಕೆಲಸಕ್ಕೆ ಅವಳನ್ನು ಅರ್ಹಳೆಂದು ಪರಿಗಣಿಸುವ ಮಾತೊಂದನ್ನು ಬಿಟ್ಟರೆ ಉಳಿದೆಲ್ಲವೂ ದಾಸಿಯ ಕೆಲಸಗಳೇ ಅವಳು ಅನುಭೋಗದ ವಸ್ತು ಮಾತ್ರ ಎಂಬ ಖಚಿತ ನಿಲುವು. ಈ ರೀತಿಯ ದಾಸ್ಯದ ದುಡಿಮೆಗೆ ಅವಳಿಗೆ ಸಿಗುವ ಪ್ರತಿಫಲ ಎಂತಹದ್ದೆಂದರೆ "ನ ಸ್ತ್ರೀ ಸ್ವಾತಂತ್ರಮರ್ಹತಿ" ಎಂಬುದು. ಹಾಗಾಗಿ ಮಹಿಳೆ ನಾಲ್ಕುಗೋಡೆಗಳ ಮಧ್ಯೆಯೇ ತನ್ನೆಲ್ಲಾ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಬೇಕಾಗಿರುತ್ತದೆ.

ಈ ನಾಟಿ ವೈದ್ಯ ಪದ್ಧತಿಯನ್ನು ಪುರುಷರು ಲಾಭದ ಉದ್ದೇಶವನ್ನಿಟ್ಟುಕೊಂಡು ನಿರ್ವಹಿಸುತ್ತಾರೆ. ಆದರೆ ಮಹಿಳೆಯರಿಗೆ ಈ ಲಾಭದ ಉದ್ದೇಶವಿರುವುದಿಲ್ಲ. ಇದ್ದರೂ ಸಹ ಅದು ಅತಿಯಾಗಿರುವುದಿಲ್ಲ. ಬದಲಾಗಿ ಭಾವನಾತ್ಮಕ ಸಂಬಂಧಗಳಿಗೆ ಹೆಚ್ಚಿನ ಮಹತ್ವವನ್ನು ನೀಡುತ್ತಾರಾದ್ದರಿಂದ ಅವರು ಯಜಮಾನ ಸ್ಥಾನದಲ್ಲಿ ಕಂಡುಬರಲು ವಿಫಲರಾಗುತ್ತಾರೆ. ಹಾಗೂ ಮನೆಯನಾಲ್ಕು ಗೋಡೆಗಳ ಮಧ್ಯೆಯೇ ಸೀಮಿತ ಚೌಕಟ್ಟಿನಲ್ಲಿ ಜೀವನ ಸಾಗಿಸುವವರಾಗಿದ್ದಾರೆ. ಮಹಿಳೆ ನಾಲ್ಕು ಗೋಡೆಗಳ ನಡುವೆ ಎಂದು, ಏಕೆ ಮತ್ತು ಹೇಗೆ ಸಿಲುಕಿಕೊಂಡಳು ಎಂಬುದನ್ನು ಮಾರ್ಕ್ಸ್, ಎಂಗೇಲ್ಸ್, ಪಂಥದವರು ಆರ್ಥಿಕತೆಯ ನೆಲೆಯಲ್ಲಿ ವ್ಯಾಖ್ಯಾನಿಸುತ್ತಾರೆ. ಖಾಸಗಿ ಆಸ್ತಿಯ ಕಲ್ಪನೆ, ಅದನ್ನು ಸಾಧ್ಯವಾಗಿಸಿದ ಆದಿಮ ತಂತ್ರಜ್ಞಾನ ಹಾಗೂ ಕೃಷಿ ತಿಳುವಳಿಕೆಗಳು ಒಂದು ಕಡೆಯಿಂದ ಪುರುಷರಿಗೆ ಆರ್ಥಿಕ ಹತೋಟಿಯನ್ನು ಒದಗಿಸಿತಾದರೆ, ನಿಸರ್ಗವು ಹೆಣ್ಣಿನ ಮೇಲೆ ಹೊರಿಸಿದ ಬಸಿರು, ಹೆರಿಗೆ, ತಾಯ್ತನಗಳ ಹೊಣೆಗಾರಿಕೆಗಳು ಅವಳು ಈ ಆರ್ಥಿಕ ಚಟುವಟಿಕೆಗಳಲ್ಲಿ ಅವನಿಗೆ ಸಮಸಮವಾಗಿ ಪಾಲ್ಗೊಳ್ಳಲು ತಡೆಗಳಾಗಿ ನಿಂತವು ಎಂಬುದು ಏಂಗೆಲ್ಸ್ ಪ್ರತಿಪಾದಿಸಿದ ಮುಖ್ಯ ಚಿಂತನೆ. ಸಮುದಾಯಗಳು ಒಂದೆಡೆ ನೆಲೆನಿಂತ ಕಾಲಕ್ಕೆ ದಿನನಿತ್ಯದ ಹೊಟ್ಟೆಪಾಡಿಗಾಗಿ ಗಂಡಸನ್ನು ಅವಲಂಬಿಸಬೇಕಾದ ದುಸ್ಥಿ:ತಿ ಹೆಣ್ಣಿಗೆ ಒದಗಿದ್ದರಿಂದ ಅವಳ ಬದುಕು ಅವನ ಅನುಕೂಲ, ಇಚ್ಛೆ ಹಾಗೂ ನಿರೀಕ್ಷೆಗಳಿಗೆ ಬದ್ಧವಾಗಿ ನಡೆಯುವ ಅನಿವಾರ್ಯವೂ ಒದಗಿತು. ಹಾಗಾಗಿ ಮಹಿಳೆ ಕುಟುಂಬದಲ್ಲಿನ ನಾಲ್ಕು ಗೋಡೆಗಳಿಗೆ ಸೀಮಿತಳಾಗಬೇಕಾಯಿತು. ಹೀಗೆ ಮಹಿಳೆ ಪುರುಷನ ಸೇವಕಳಂತೆ ಜೀವಿಸಲಾರಂಭಿಸಿದಳು. ಇನ್ನು ಈ ನಾಟಿ ವೈದ್ಯ ಪದ್ಧತಿಯಲ್ಲಿ ತೊಡಗಿರುವ ಮಹಿಳೆಯರನ್ನು ನೋಡಿದರೂ ಸಹ ಈ ಮೇಲಿನ ಸಂದರ್ಭಗಳೇ ಗೋಚರಿಸುತ್ತವೆ. ಏಕೆಂದರೆ ಈ ವೈದ್ಯ ಪದ್ಧತಿಯನ್ನು ನೀಡುವವರು ಮನೆಯಿಂದ ಹೊರನಡೆದು ಊರೂರು ಅಲೆದು ಚಿಕಿತ್ಸೆಯನ್ನು ನೀಡುವಂತಿಲ್ಲ. ಬದಲಾಗಿ ಮನೆಯಲ್ಲಿಯೇ ಚಿಕಿತ್ಸೆಯನ್ನು ನೀಡಬೇಕಾಗುತ್ತದೆ. ಅದೇ ರೀತಿಯಲ್ಲಿ ಕಾಯಿಲೆ ಬಂದವರೂ ಸಹ ಈ ವೈದ್ಯ ಚಿಕಿತ್ಸೆಯನ್ನು ನೀಡುವವರನ್ನು ಹುಡುಕಿಕೊಂಡೇ ಬರುತ್ತಾರೆ. ಹಾಗಾಗಿ ಹೆಚ್ಚಿನ ಮಹಿಳೆಯರು ಮನೆಯಲ್ಲಿಯೇ ಚಿಕಿತ್ಸೆಯನ್ನು ನೀಡುತ್ತಾರೆ ಮತ್ತು ಪಡೆಯುತ್ತಾರೆ.

ಸ್ತ್ರೀವಾದದಲ್ಲಿ ತುಂಬಾ ಚರ್ಚೆಗೆ ಒಳಗಾಗಿರುವ ಸಂಗತಿಯೆಂದರೆ ಮಹಿಳೆಯರ ಕಾರ್ಯಕ್ಷೇತ್ರ ಕುರಿತದ್ದಾಗಿದೆ. ಸಮಾಜ ವಿಜ್ಞಾನಗಳಲ್ಲಿ ಎರಡು ಬಗೆಯ ಕಾರ್ಯಕ್ಷೇತ್ರಗಳನ್ನು ಗುರುತಿಸಲಾಗುತ್ತದೆ. ಮೊದಲನೆಯದು ಸಾರ್ವಜನಿಕ ಕಾರ್ಯಕ್ಷೇತ್ರ ಮತ್ತು ಎರಡನೆಯದು ಖಾಸಗಿ ಕಾರ್ಯಕ್ಷೇತ್ರ. ಇಲ್ಲಿ ಸಾರ್ವಜನಿಕ ಕಾರ್ಯಕ್ಷೇತ್ರವೆಂಬುದು ಪುರುಷರ ಕಾರ್ಯಕ್ಷೇತ್ರವಾದರೆ, ಖಾಸಗಿ ಎಂಬುದು ಮಹಿಳೆಯರ ಕಾರ್ಯಕ್ಷೇತ್ರವಾಗಿದೆ. ಮಹಿಳೆಯರ ಕಾರ್ಯಕ್ಷೇತ್ರವೇನಿದ್ದರೂ ಕುಟುಂಬದ ಚೌಕಟ್ಟಿನಲ್ಲಿ ಎಂಬುದು ಸರ್ವವಿಧಿತ. ಕುಟುಂಬದಾಚೆಗೆ ಮಹಿಳೆಗೆ ಪ್ರವೇಶವಿಲ್ಲ. ಗೃಹಿಣಿ ಎಂಬ ನಾಟಿಯು ಮಹಿಳೆಯರ ಕಾರ್ಯಕ್ಷೇತ್ರವನ್ನು ಸ್ಪಷ್ಟವಾಗಿ ಸೂಚಿಸುತ್ತದೆ. ಆದರೂ ಸಾರ್ವಜನಿಕ ಕ್ಷೇತ್ರದಲ್ಲಿ ಮಹಿಳೆಯರು ಕಾರ್ಯನಿರ್ವಹಿಸುತ್ತಿದ್ದಾರೆ. ಆದರೆ ತಾರತಮ್ಯವಾದಿ ದೃಷ್ಟಿಕೋನದಿಂದಾಗಿ ಮತ್ತು ಪುರುಷಶಾಹಿಯ ಆಳ್ವಿಕೆಯಿಂದಾಗಿ ಅಲ್ಲಿ ಅವರು ಅಗೋಚರವಾಗಿದ್ದಾರೆ. ಸಾರ್ವಜನಿಕ ಅವಕಾಶದಲ್ಲಿ ಪ್ರವೇಶಿಸುವ ಮಹಿಳೆಗೆ ಸಮಾಜ ಮನ್ನಣೆ ನೀಡುವುದಿಲ್ಲ. ಮಹಿಳೆಯರ ಕಾರ್ಯಕ್ಷೇತ್ರವು ಗಂಡ, ಮಕ್ಕಳು, ಕುಟುಂಬವಾಗಿರುವುದರಿಂದ ಅದು ಖಾಸಗಿಯಾದುದು. ಹಾಗಾಗಿ ಇಲ್ಲಿ ನಾವು ಈ ನಾಟಿ ವೈದ್ಯಪದ್ಧತಿಯನ್ನು ನೀಡುವಂತಹ ಮಹಿಳೆಯರ ಸ್ಥಿತಿಗತಿಗಳೂ ಕೂಡ ಚಿಂತಾಜನಕವಾಗಿವೆ. ಅಂದರೆ ಇವರು ಸಾರ್ವಜನಿಕ ಬದುಕಿಗೆ ಕಾಲಿಟ್ಟಿದ್ದರೂ ಸಹ ಅವರು ಅಗೋಚರವಾಗಿದ್ದಾರೆ. ಏಕೆಂದರೆ ಈ ಪುರುಷಶಾಹಿ ವ್ಯವಸ್ಥೆ ಮಹಿಳೆಯರ ಬೆಳವಣಿಗೆಯನ್ನು ಸಹಿಸಿಕೊಳ್ಳುವುದಿಲ್ಲ.

ಈ ನಾಟಿ ವೈದ್ಯಪದ್ಧತಿಯಲ್ಲಿ ತೊಡಗಿರುವ ಮಹಿಳೆಯರದು ಅನೌಪಚಾರಿಕ ದುಡಿಮೆಯಾಗಿದ್ದು, ಇಲ್ಲಿ ಅವರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಕಾಣಲಾಗುತ್ತಿದೆ. ಮುಖ್ಯವಾಗಿ ಅವರ ದುಡಿಮೆಯನ್ನು ದುಡಿಮೆ ಎಂದು ಪರಿಗಣಿಸುತ್ತಿಲ್ಲ. ಅದರಲ್ಲಿಯೂ ಮಹಿಳೆಯರು ಕುಟುಂಬದಲ್ಲಿಯ ಹಲವಾರು ಕೆಲಸ ಕಾರ್ಯಗಳ ಮಧ್ಯದಲ್ಲಿಯೇ ಈ ನಾಟಿ ಔಷಧಿ ಚಿಕಿತ್ಸೆಯನ್ನು ನೀಡುವಂತಹ ಕೆಲಸದಲ್ಲಿ ತೊಡಗಿರುತ್ತಾರೆ. ಹಾಗಾಗಿ ಅವರಿಗೆ ಬಿಡುವು ಎಂಬುದೇ ಇಲ್ಲದಾಗಿದೆ. ಈ ಪದ್ಧತಿಯಲ್ಲಿ ತೊಡಗಿರುವ ಮಹಿಳೆಯರನ್ನು ಸಮಾಜ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದನ್ನು ಕಾಣುತ್ತೇವೆ. ಕೆಲವು ಸಂದರ್ಭಗಳಲ್ಲಿ ಇವರು ಮಾಡುವ ಕೆಲಸಕ್ಕೆ ಪ್ರತಿಫಲ ದೊರೆಯಬಹುದು ಅಥವಾ ದೊರಯದೇ ಇರಬಹುದು. ಹಾಗಾಗಿ ಈ ವೃತ್ತಿಯಲ್ಲಿ ತೊಡಗಿರುವವರ ಆರ್ಥಿಕ ಪರಿಸ್ಥಿತಿ ಉತ್ತಮವಾಗಿಲ್ಲದಿರುವುದನ್ನು ಕಾಣಲಾಗಿದೆ. ಇನ್ನೂ ಒಂದು ಮುಖ್ಯ ಸಂಗತಿ ಏನೆಂದರೆ ಗ್ರಾಮೀಣ ಭಾಗಗಳಲ್ಲಿ ಗಂಡುಮಗುವಿಗೆ ಕೊಡುವಷ್ಟು ಪ್ರಾಧಾನ್ಯತೆ ಹೆಣ್ಣು ಮಗುವಿಗೆ ಕೊಡುವುದಿಲ್ಲ. ಹಾಗಾಗಿ ಮಹಿಳೆ ಗರ್ಭಿಣಿಯಾದ ಸಂದರ್ಭದಲ್ಲಿ ಅವಳಿಗೆ ಹೆಣ್ಣು ಮಗು ಹುಟ್ಟುತ್ತದೆ ಎಂದು ತಿಳಿದು ಬಂದಲ್ಲಿ ಆ ಮಗುವನ್ನು ತೆಗೆಯಿಸಲು ಮತ್ತೆ ನಾಟಿ ವೈದ್ಯ ಪದ್ಧತಿಯನ್ನೇ ಅನುಸರಿಸುತ್ತಾರೆ. ಒಂದು ವೇಳೆ ನಾಟಿ ಔಷಧವನ್ನು ನೀಡುವವಳು ಮಹಿಳೆಯಾಗಿದ್ದರೆ ಅವಳು ನಾನಾ ವಿಧದ ದೂಷಣೆಗಳಿಗೆ ಒಳಗಾಗುವುದಂತೂ ಕಂಡಿತ. ಹಾಗಾಗಿ ಇಲ್ಲಿ ಮತ್ತೆ ಮಹಿಳೆ ಮಹಿಳೆಗೇ ಶತ್ರು ಎಂಬ ಸಿದ್ಧಾಂತವನ್ನು ಕಟ್ಟಿಬಿಡಲಾಗುತ್ತದೆ. ಆದರೆ ಇದರ ಹಿಂದಿನ ಹಸ್ತ ಮಾತ್ರ ಪುರುಷನದ್ದಾಗಿರುತ್ತದೆ. ಇದು ಮಾತ್ರ ಯಾರ ಕಣ್ಣಿಗೂ ಗೋಚರಿಸುವುದಿಲ್ಲ. ಹಾಗಾಗಿ ವೈದ್ಯಪದ್ಧತಿಯನ್ನು ಅನುಸರಿಸುವವರು ತುಂಬಾ

ಸಂಕಷ್ಟಗಳಿಗೆ ಸಿಲುಕಿರುತ್ತಾರೆ. ನಮ್ಮ ಸಮಾಜದ ಸಂದರ್ಭದಲ್ಲಿ ಕುಟುಂಬವೆಂಬುದು ಆದರ್ಶದ ಸಂಗತಿಯಾಗಿದೆ. ಹಾಗೂ ಸಂಸ್ಕೃತಿಯ ಪ್ರತಿನಿಧಿಯಾಗಿದೆ. ಕುಟುಂಬ ಹಾಗೂ ಕೌಟುಂಬಿಕ ವ್ಯವಸ್ಥೆಯು ಮಹಿಳೆಯ ಮೇಲೆ ಅನೇಕ ಬಗೆಯ ನಿಯಂತ್ರಣಗಳನ್ನು ವಿಧಿಸುತ್ತದೆ. ಪುರುಷರಿಗೆ ಇಲ್ಲದಿರುವ ನಿಯಂತ್ರಣವನ್ನು ಮಹಿಳೆಯರ ಮೇಲೆ ಹೇರಲಾಗುತ್ತದೆ. ಹಾಗಾಗಿ ಈ ನಾಟಿ ವೈದ್ಯ ಪದ್ಧತಿಯನ್ನು ಅನುಸರಿಸುತ್ತಿರುವ ಮಹಿಳೆಯರ ಮೇಲೂ ಸಹ ಹಲವಾರು ಬಗೆಯ ನಿಯಂತ್ರಣಗಳನ್ನು ಹೇರಲಾಗಿದೆ. ಮುಖ್ಯವಾಗಿ ಈ ವೈದ್ಯಪದ್ಧತಿಯನ್ನು ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರೇ ಹೆಚ್ಚಾಗಿ ಕಂಡುಬರುವುದರಿಂದ ಇವರು ಕೌಟುಂಬಿಕ ನೆಲೆಯಲ್ಲಿಯೇ ನಿರ್ವಚಿಸಲ್ಪಡುತ್ತಾರೆ.

ಇಂದು ದೇಶದಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ರಾಜಕೀಯ ಹಾಗೂ ಕೌಟುಂಬಿಕ ಲಿಂಗ ಅಸಮಾನತೆಯು, ಸ್ತ್ರೀಯರ ಸಂಪೂರ್ಣ ಆರೋಗ್ಯಕ್ಕೆ ಹಾಗೂ ಸಮುದಾಯದ ಆರೋಗ್ಯಕ್ಕೆ ಹೇಗೆ ಪೂರಕವಾಗಿದೆ ಎಂಬುದನ್ನು ಸ್ಪಷ್ಟೀಕರಿಸುವುದು ಹಾಗೂ ಸಾಮಾಜಿಕ ವಸ್ತು ಸ್ಥಿತಿಗಳನ್ನು ಮಹಿಳೆಯರ ಅನುಭವಾತ್ಮಕ ನೆಲೆಯಿಂದ ಪರಿಶೀಲಿಸುವುದು ಅಗತ್ಯವಾಗಿದೆ. ತಲೆತಲೆಮಾರುಗಳಿಂದ ಬಂದ ಅನುಭವಾತ್ಮಕ ಜನ್ಯವಾದ ಜ್ಞಾನದ ಮೇಲೆ ಆಧಾರಿತವಾದ ಆರೋಗ್ಯಪಾಲನೆ ಮತ್ತು ಚಿಕಿತ್ಸೆಗಳಲ್ಲಿ ಈ ನಾಟಿ ವೈದ್ಯ ಪದ್ಧತಿಯೂ ಒಂದು. ಇದು ಮಕ್ಕಳ, ಮುದುಕರ, ಬಸುರಿ, ಬಾಣಂತಿಯರ ಹಲವಾರು ಸಣ್ಣಪುಟ್ಟ, ಕೆಲವೊಮ್ಮೆ ಕೂಸು ಗಂಭೀರವಾದ ಆರೋಗ್ಯ ಸಮಸ್ಯೆಗಳನ್ನು ಚೆನ್ನಾಗಿ ನಿಭಾಯಿಸಿ ನಿವಾರಿಸುತ್ತದೆ. ಈಗಲೂ ಸಹ ಆಧುನಿಕ ಆರೋಗ್ಯ ಸೌಲಭ್ಯಗಳಿಲ್ಲದೇ ಇರುವ ಗ್ರಾಮಾಂತರ ಪ್ರದೇಶಗಳಲ್ಲಿ ಹಾಗೂ ಬಡವರ್ಗಗಳ ಕುಟುಂಬಗಳಲ್ಲಿ, ಆರೋಗ್ಯ ಸಮಸ್ಯೆಗಳನ್ನೆದುರಿಸುವಲ್ಲಿ ಈ ಪದ್ಧತಿಗೇ ಮೊದಲ ಆಯ್ಕೆಯಾಗಿರುತ್ತದೆ. ಹಾಗಾಗಿ ಈ ನಾಟಿ ವೈದ್ಯಪದ್ಧತಿಯಲ್ಲಿ ತೊಡಗಿರುವ ಮಹಿಳೆಯರು ಸಮಾಜದಲ್ಲಿ ಪ್ರಮುಖ ಸ್ಥಾನದಲ್ಲಿ ಕಾಣಿಸಿಕೊಳ್ಳಬೇಕು ನಿಜ. ಆದರೆ ಪುರುಷಶಾಹಿ ವ್ಯವಸ್ಥೆಯಲ್ಲಿ ಇವರು ಪ್ರಧಾನ ನೆಲೆಗೆ ಬಾರದೆ ಕುಟುಂಬಕ್ಕೆ ಮಾತ್ರ ಸೀಮಿತವಾಗಿರುವುದನ್ನು ಕಾಣಲಾಗುತ್ತದೆ.

ಪುರುಷರಂತೆ ಅನೇಕ ಮಹಿಳೆಯರು ಮನೆಯ ಹೊರಗೆ ಉತ್ಪಾದನಾ ದುಡಿಮೆಯಲ್ಲಿ ತೊಡಗಿರುತ್ತಾರೆ. ಇದಲ್ಲದೆ ಅವರು ಮನೆಯ ಒಳಗೆ ಅನೇಕ ಉತ್ಪಾದನಾ ಚಟುವಟಿಕೆಗಳನ್ನು ಮಾಡುತ್ತಾರೆ. ಈ ನಾಟಿವೈದ್ಯ ಪದ್ಧತಿಯನ್ನು ಒಂದು ವೃತ್ತಿಯನ್ನಾಗಿಸಿಕೊಂಡವರು ಪ್ರತಿದಿನ ಎರಡು ಬಗೆಯ ದುಡಿಮೆಯಲ್ಲಿ ತೊಡಗಿರುತ್ತಾರೆ. ಇವೆಲ್ಲಕ್ಕಿಂತ ಮಿಗಿಲಾಗಿ ಪುರುಷರಿಗೆ ಅಸಾಧ್ಯವಾದ ಮತ್ತು ಅತ್ಯಂತ ಉತ್ಪಾದನಾ ಮೌಲ್ಯವುಳ್ಳ ಸಂತಾನೋತ್ಪತ್ತಿಯ ಕಾರ್ಯವನ್ನು ಅವರು ನಿರ್ವಹಿಸುತ್ತಾರೆ. ಇಲ್ಲಿ ಮುಖ್ಯವಾಗಿ ಅವರ ಪರಿಶ್ರಮ ಕಣ್ಣಿಗೆ ಗೋಚರಿಸುತ್ತದೆ. ಆದರೆ ಅವರ ಕಾಣಿಕೆಯು ಅಗೋಚರವಾಗಿರುತ್ತದೆ. ಈ ನಾಟಿ ವೈದ್ಯ ವೃತ್ತಿಯನ್ನು ಒಂದು ಹವ್ಯಾಸವಾಗಿ ತೆಗೆದುಕೊಂಡವರು ನಾನಾ ವಿಧದ ದುಡಿಮೆಯಲ್ಲಿ ತೊಡಗಿಕೊಂಡಿರುವುದು ನಮಗೆ ಗೋಚರಿಸುತ್ತದೆ. ಲಿಂಗ ಸಂಬಂಧಿ ಶ್ರಮವಿಭಜನೆಯ ವ್ಯಾಪ್ತಿಯನ್ನು ವಿಸ್ತತಗೊಳಿಸುವುದರ ಮೂಲಕ ಮಹಿಳೆಯರು ಅಧಿಕ ಜವಾಬ್ದಾರಿ

ಹಾಗೂ ಹೊರೆಯನ್ನು ನಿಭಾಯಿಸುವಂತೆ ಮಾಡಲಾಗುತ್ತದೆ. ಹಾಗಾಗಿ ಮಹಿಳೆಯರು ಈ ಪಿತೃಪ್ರಧಾನ ಸಾಮಾಜಿಕ ವ್ಯವಸ್ಥೆಯಲ್ಲಿ ಪುರುಷನ ದಾಸಿಯಾಗಿಯೇ ಇರುವುದನ್ನು ಕಾಣಲಾಗುತ್ತದೆ.

ಈ ನಾಟಿವೈದ್ಯಪದ್ಧತಿಯ ಚಿಕಿತ್ಸೆಯಲ್ಲಿ ಬಳಸುವ ಔಷಧಿಯ ಗುಣವುಳ್ಳ ಸಸ್ಯಗಳನ್ನು ಕಾಡಿನಿಂದ ಸಂಗ್ರಹಿಸಿರುತ್ತಾರೆ. ಇಲ್ಲಿ ಮುಖ್ಯವಾಗಿ ಈ ಸಂಗ್ರಹಣೆ ಕಾರ್ಯದಲ್ಲಿ ಪುರುಷರೇ ಹೆಚ್ಚಾಗಿ ಕಂಡುಬರುತ್ತಾರೆ. ಮಧ್ಯಮ ವರ್ಗದ ಕುಟುಂಬಗಳಲ್ಲಿ ಹೆಚ್ಚಾಗಿ ಕಂಡುಬರುವ ಈ ನಾಟಿ ವೈದ್ಯ ಪದ್ಧತಿಯಲ್ಲಿ ಪುರುಷರದೇ ಮೇಲುಗೈ ಇರುತ್ತದೆ. ಇನ್ನೊಂದು ವಿಷಯವೆಂದರೆ ಈ ನಾಟಿ ವೈದ್ಯ ಪದ್ಧತಿಯನ್ನು ಒಂದು ವೃತ್ತಿಯಾಗಿಸಿಕೊಂಡ ಮಹಿಳೆಯರು ಬೆರಳೆಣಿಕೆಯಷ್ಟು ಮಾತ್ರ ಹೆಚ್ಚಾಗಿ ಈ ಪದ್ಧತಿಯನ್ನು ಹವ್ಯಾಸವಾಗಿ ತೆಗೆದುಕೊಂಡ ಮಹಿಳೆಯರು ಬಹಳಷ್ಟು ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಹಾಗಾಗಿ ಈ ನಾಟಿವೈದ್ಯ ಚಿಕಿತ್ಸೆಯನ್ನು ಕುಟುಂಬದಲ್ಲಿ ಪುರುಷನಿಲ್ಲದ ಸಮಯದಲ್ಲಿ ಮಹಿಳೆಗೆ ನೀಡುವ ಅವಕಾಶ ಸಿಗುತ್ತದೆ. ಮತ್ತು ಪುರುಷನ ಮಾರ್ಗದರ್ಶನದಲ್ಲಿಯೇ ಚಿಕಿತ್ಸೆಯ ವಿಧಾನಗಳನ್ನು ಅನುಸರಿಸಬೇಕಾಗುತ್ತದೆ. ಒಂದು ವೇಳೆ ಪುರುಷನ ಅನುಮತಿ ಪಡೆಯದೇ ಚಿಕಿತ್ಸೆಯನ್ನು ನೀಡಿದಲ್ಲಿ ಮಹಿಳೆ ನಾನಾ ದೂಷಣಗಳಿಗೆ ಬಲಿಯಾಗಬೇಕಾಗುತ್ತದೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾಗಿರುವುದೇನೆಂದರೆ ಮಹಿಳೆ ಯಾವುದೇ ವಿದ್ಯೆಯಲ್ಲಿ ಪರಿಣಿತಿಯನ್ನು ಹೊಂದಿದ್ದರೂ ಸಹ ಆ ವಿದ್ಯೆಯನ್ನು ಪ್ರಯೋಗಿಸುವಲ್ಲಿ ಪುರುಷನ ಅನುಮತಿಯನ್ನು ಪಡೆಯಬೇಕಾಗಿರುವುದು ಮತ್ತು ಅವಳಿಗೆ ವೈಯಕ್ತಿಕ ಸ್ವಾತಂತ್ರ್ಯವೆಂಬುದೇ ಇಲ್ಲವಾಗಿದೆ ಎಂದು ಹೇಳಬಹುದು.

ಒಟ್ಟಿನಲ್ಲಿ ಗ್ರಾಮೀಣ ಭಾಗದಲ್ಲಿ ಕಂಡುಬರುವ ಈ ನಾಟಿವೈದ್ಯ ಪದ್ಧತಿಯಲ್ಲಿ ತೊಡಗಿರುವ ಮಹಿಳೆಯರು ಅನೇಕ ತಾರತಮ್ಯಗಳಿಂದ ಕೂಡಿದ ವ್ಯವಸ್ಥೆಯಲ್ಲಿ ಜೀವನ ಸಾಗಿಸುತ್ತಿದ್ದಾರೆ. ಮುಖ್ಯವಾಗಿ ಧರ್ಮದ ಚೌಕಟ್ಟಿನಡಿಯಲ್ಲಿ ನರಳಾಡುತ್ತಿದ್ದಾರೆ. ಅವರಿಗೆ ಯಾವುದೇ ವಯಕ್ತಿಕ ಸ್ವಾತಂತ್ರ್ಯ ಎಂಬುದೇ ಇಲ್ಲವಾಗಿದೆ ಎಂಬ ಅಂಶಗಳನ್ನು ಮತ್ತು ಅವರ ಶ್ರಮವನ್ನು ದುಡಿಮೆ ಎಂದು ಪರಿಭಾವಿಸಿಕೊಳ್ಳದೇ ಅದೇ ಅವರ ಕರ್ತವ್ಯವೆಂದು ಪರಿಭಾವಿಸಿ ಕೊಂಡಿರುವುದನ್ನು ನಾವು ಇಲ್ಲಿ ಕಾಣುತ್ತೇವೆ.

# ಅಧ್ಯಾಯ ೫

## ಸಮಾರೋಪ

ಪುರುಷ ಪ್ರಧಾನ ಭಾರತೀಯ ಸಮಾಜದಲ್ಲಿ ಮಹಿಳೆಯರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಚಿಂತಿಸುವ, ಪರಿಹಾರದ ಕುರಿತು ಅಧ್ಯಯನ ಮಾಡುವ ಹಂತದಲ್ಲಿ ನಮಗೆ ಅನೇಕ ಸವಾಲುಗಳು ಎದುರಾಗುತ್ತವೆ. ಅನಾದಿಕಾಲದಿಂದಲೂ ದ್ವಿತೀಯ ದರ್ಜೆಯ ಪ್ರಜೆಗಳಾಗಿರುವ ಮಹಿಳೆಯರ ಸಮಾನತೆ ಕುರಿತ ಯೋಚಿಸುವ, ಪ್ರತಿಭಟಿಸುವ, ಹೋರಾಟ ನಡೆಸುವ ಘಟ್ಟದಲ್ಲಿ, ಸ್ವಾವಲಂಬಿಗಳಾಗಿ ಬದುಕುವ ಛಲದಲ್ಲಿ ತನ್ನ ಸ್ಥಾನಮಾನದ ಹಕ್ಕಿನಲ್ಲಿ ಎಲ್ಲೋ ತಾನೇ ಪ್ರತ್ಯೇಕವಾಗಿ ಇರಬಯಸುತ್ತಾಳೆ. ಇತಿಹಾಸದ ಪುಟಗಳನ್ನು ತೆರೆದುನೋಡಿದರೆ ವೇದಾಧ್ಯಯನ ಮಾಡಿದ ಮಹಿಳೆಯರನ್ನು ರಾಜ್ಯ ಮತ್ತು ರಾಷ್ಟ್ರಕ್ಕಾಗಿ ಕತ್ತಿ ಹಿಡಿದು ಹೋರಾಡಿದ ಕಿತ್ತೂರು ರಾಣಿ ಚೆನ್ನಮ್ಮ, ಝಾನ್ಸಿರಾಣಿ ಲಕ್ಷ್ಮೀಬಾಯಿ ಮೊದಲಾದ ವೀರವನಿತೆಯರನ್ನು ನೋಡುತ್ತೇವೆ. ದೇಶವನ್ನು ಸಮರ್ಥವಾಗಿ ಮುನ್ನಡೆಸಿದ ಇಂದಿರಾಗಾಂಧಿ, ಜೈಲಿನಲ್ಲಿ ಕೈದಿಗಳ ಮನಃ ಪರಿವರ್ತಿಸಿಲು ಸಮರ್ಥರಾದ ಕಿರಣ್‌ಬೇಡಿ, ನೆಲ, ಜಲ ಉಳಿಸಲು ಹೋರಾಡಿದ ಕುಸುಮಾ ಸೊರಬ, ಮೇಧಾಪಾಟ್ಕರ್ ನಮಗೆ ಮಾದರಿಯಾಗುತ್ತಾರೆ. ಆದರೂ ಸಹ ಮಹಿಳೆಯರು ಎದುರಿಸುತ್ತಿರುವ ಮೂಲಭೂತ ಸಮಸ್ಯೆಗಳು ಹಾಗೆಯೇ ಉಳಿದುಕೊಳ್ಳುತ್ತಿವೆ. ಕಾಲಕ್ಕೆ ತಕ್ಕಂತೆ ಕೆಲವು ಬದಲಾವಣೆಗಳು ವಿದ್ಯೆಯಲ್ಲಿ, ವೇಷ ಭೂಷಣಗಳಲ್ಲಿ, ಸ್ಥಾನಮಾನಗಳಲ್ಲಿ, ಕೌಟುಂಬಿಕ ಸ್ಥಿತಿಗತಿಗಳಲ್ಲಿ ಹಿಂದಿನವರಿಗಿಂತ ಭಿನ್ನವಾಗಿರಬಹುದು. ಆದರೆ ಅವರ ಸ್ವಾತಂತ್ರ್ಯ ವ್ಯಕ್ತಿತ್ವ ರೂಪಿಸುವಲ್ಲಿ ಹೆಚ್ಚಿನ ಪ್ರಗತಿಯೇನೂ ಸಾಧಿಸಿಲ್ಲ ಎನ್ನುವುದು ಕಹಿ ಸತ್ಯ. ಹೆಣ್ಣಿಗಿಂತ ಗಂಡು ಶ್ರೇಷ್ಠ ಎಂಬ ತಾರತಮ್ಯವು ಎಳೆಯವಯಸ್ಸಿನಿಂದಲೇ ಅವರಲ್ಲಿ ಕೀಳರಿಮೆ ಮೂಡಿಸಿ, ಆರೋಗ್ಯ, ಶಿಕ್ಷಣದಿಂದ ವಂಚಿತರನ್ನಾಗಿಸುತ್ತಿದೆ. ಅನಕ್ಷರಸ್ಥ ಬಡವರ್ಗಗಳಲ್ಲಿ ಮಾತ್ರವಲ್ಲದೆ ವಿದ್ಯಾವಂತರಲ್ಲಿಯೂ ಸಹ ಈ ಲಿಂಗ ತಾರತಮ್ಯ ಹೆಚ್ಚಾಗುತ್ತಾ ಸಾಗುತ್ತಿದೆ. ಸ್ತ್ರೀಯೊಬ್ಬಳ ಸಹಜ ಕ್ರಿಯೆಗಳಾದ ಮೈ ನೆರೆಯುವಿಕೆ, ಮುಟ್ಟು, ಗರ್ಭಧಾರಣೆ, ಹೆರಿಗೆ, ಶಿಶುಪಾಲನೆ ಮುಂತಾದ ಸಹಜ ಸ್ವಾಭಾವಿಕ ಗುಣಗಳು ಒಂದು ಸಮಾಜದ ನಿರ್ಮಾಣದಲ್ಲಿ ಅಮೂಲ್ಯವಾದ ಕೊಡುಗೆ ನೀಡುತ್ತವೆ. ಆದರೆ ಸಮಾನತೆ, ವ್ಯಕ್ತಿಕೇಂದ್ರಿತ ಉದ್ಯಮಶೀಲತೆ ಮುಂತಾದ

ಮೌಲ್ಯಗುಣಗಳು ಸ್ತ್ರೀ ಸಹಜ ವಿಶಿಷ್ಟತೆಗಳನ್ನು ಮೌನವಾಗಿದ್ದುಕೊಂಡೆ ನಿರಾಕರಿಸುತ್ತಿವೆ. ಹಾಗಾಗಿ ಮಹಿಳೆ ಇಂದು ನಾಲ್ಕು ಗೋಡೆಗಳಿಂದ ಮುಕ್ತಿಯನ್ನು ಹೊಂದದೇ ಅಲ್ಲಿಯೇ ಹಲವಾರು ತೊಂದರೆಗಳನ್ನು ಅನುಭವಿಸುತ್ತಿದ್ದಾಳೆ.

ನಾಟಿ ವೈದ್ಯ ಪದ್ಧತಿಯು ಈ ಹಿಂದೆಯೇ ಹೇಳಿದಂತೆ ಹಲವಾರು ವರ್ಷಗಳ ಇತಿಹಾಸವನ್ನು ಹೊಂದಿದ್ದು ಇಂದಿಗೂ ಸಹ ಗ್ರಾಮೀಣ ಪ್ರದೇಶಗಳಲ್ಲಿ ಜಾರಿಯಲ್ಲಿರುವುದು ಕಂಡುಬಂದಿದೆ. ಅಧ್ಯಯನ ಕ್ಷೇತ್ರವಾದ ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನಲ್ಲಿ ಮಹಿಳೆಯರು ಈ ನಾಟಿ ಔಷಧಿ ಪದ್ಧತಿಯನ್ನು ಅನುಸರಿಸುತ್ತಿರುವುದನ್ನು ಕಾಣಲಾಗಿದೆ. ಹಾಗೆಯೇ ಅವರ ಜೀವನ ಸ್ಥಿತಿಗತಿಗಳನ್ನು ಸಹ ಈ ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ. ಮುಖ್ಯವಾಗಿ ಜಾಗತೀಕರಣ, ಆಧುನೀಕರಣ, ಖಾಸಗೀಕರಣದ ಇಂತಹ ಸಂದರ್ಭದಲ್ಲಿ ಈ ವೈದ್ಯ ವೃತ್ತಿಯನ್ನು ಅನುಸರಿಸುವವರು ಇರುವಂತಹದು ಒಂದು ಸೋಜಿಗದ ಸಂಗತಿಯಾಗಿದೆ. ಏಕೆಂದರೆ ಇಂದು ಹಲವಾರು ಆಧುನಿಕ ವೈದ್ಯ ಪದ್ಧತಿಗಳು ಜಾರಿಯಲ್ಲಿರುವುದರಿಂದ ಮತ್ತು ಅವುಗಳಿಗೆ ಜನರು ಹೆಚ್ಚು ಮೊರೆ ಹೋಗಿರುವುದರಿಂದಾಗಿ ಕಾಲಕ್ಕೆ ತಕ್ಕಂತೆ ಜನರ ಬೇಡಿಕೆಗಳು ಬದಲಾಗುತ್ತಿರುವುದರಿಂದಾಗಿ ಇವುಗಳ ಮಧ್ಯೆಯೇ ಈ ನಾಟಿ ವೈದ್ಯ ಪದ್ದತಿ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವುದು ಒಂದು ಆಶ್ಚರ್ಯಕರ ಸಂಗತಿಯಾಗಿದೆ ಎಂದು ಹೇಳಬಹುದು. ಈ ನಾಟಿ ವೈದ್ಯ ಪದ್ಧತಿಯಲ್ಲಿ ಸ್ತ್ರೀಯರು ತೊಡಗಿಕೊಂಡಿರುವುದು ಕಂಡುಬಂದರೂ ಸಹ ಅವರು ಮೇಲ್‌ಸ್ತರದಲ್ಲಿ ಕಂಡುಬರುತ್ತಿಲ್ಲ. ಬದಲಾಗಿ ಪುರುಷನಿಗೆ ಸಹಾಯಕಳಾಗಿ, ಪರಿಚಾರಕಿಯಾಗಿ ಗುರುತಿಸಲ್ಪಡುತ್ತಿದ್ದಾಳೆ. ಹಾಗಾಗಿ ಮಹಿಳೆಯರ ಜೀವನ ಕ್ರಮದಲ್ಲಿ ಯಾವುದೇ ರೀತಿಯ ಬದಲಾವಣೆಗಳು ಕಂಡುಬರುತ್ತಿಲ್ಲ.

ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯು ಪುರುಷನ ಅಧೀನವಾಗಿರುವಂತಹ ಪಿತೃಪ್ರಧಾನ ವ್ಯವಸ್ಥೆಯನ್ನು ಸಕ್ರಮಗೊಳಿಸುವ ಚಿಂತನಾಕ್ರಮಗಳನ್ನೇ ಪ್ರಶ್ನಿಸುವ ಮೂಲಕ ಮಹಿಳಾ ಜಾಗೃತಿ ಉಂಟಾಯಿತು ಎಂದು ಹೇಳಬಹುದಾಗಿದೆ. ಜ್ಞಾನಪೂರ್ವದ ಹಲವು ಚಿಂತನಾಕ್ರಮಗಳು ಮಹಿಳೆಯರ ಅನುಭವವನ್ನು ಸಾರಾಸಗಟಾಗಿ ತಿರಸ್ಕರಿಸಿವೆ. ಮಹಿಳೆ ಪುರಷ ಸಮನಾಗಿ ಯೋಚಿಸಲಾರಳು. ಚಿಂತಿಸಲಾರಳು. ಆ ಕಾರಣದಿಂದಾಗಿಯೇ ಸಾರ್ವಜನಿಕ ಬದುಕಿನಲ್ಲಿ, ರಾಜಕಾರಣದಲ್ಲಿ ಆಕೆಗೆ ನಿರ್ಣಾಯಕ ಸ್ಥಾನ ನಿರಾಕರಣೆಯಾಗಿರುವುದನ್ನು ನಾವು ಅರಿಸ್ಟಾಟಲ್, ರೂಸೋ, ಥಾಮಸ್ ಅಕ್ವಿನಾಸ್ ಮುಂತಾದವರ ಸಿದ್ಧಾಂತಗಳಲ್ಲಿ ಗಮನಿಸಬಹುದಾಗಿದೆ. ಈ ಕಾರಣದಿಂದಾಗಿಯೇ ಆಧುನೀಕರಣ ಪ್ರಕ್ರಿಯೆ ಮುಂದುವರೆಯುತ್ತಾ ಒಟ್ಟು ಜೀವನ ಕ್ರಮದಲ್ಲಿ ಬದಲಾವಣೆ ಉಂಟಾದರೂ ಮಹಿಳೆಯರ ಸ್ಥಿತಿಗತಿಗಳಲ್ಲಿ ಮೂಲಭೂತವಾದ ಬದಲಾವಣೆಗಳನ್ನು ನಾವು ಕಾಣಲಿಲ್ಲ. ಪಾರಂಪರಿಕ ಸಮಾಜ ಸ್ಥಿತ್ಯಂತರ ಹೊಂದುತ್ತಾ ಬಂದಂತೆಲ್ಲಾ ಹಳೆಯ ವ್ಯವಸ್ಥೆಗಳು ನಾಶವಾಗಿ ಹೊಸ ವ್ಯವಸ್ಥೆ ಹುಟ್ಟಿಕೊಂಡವು. ಹಳೆ ಸಾಮಾಜಿಕ ಸಂಬಂಧಗಳ ಬದಲಿಗೆ ಹೊಸ ಸಾಮಾಜಿಕ ಸಂಬಂಧಗಳು ಅಸ್ತಿತ್ವಕ್ಕೆ ಬಂದವು. ಪ್ರಮುಖವಾಗಿ ಇದರಲ್ಲಿ ನಮ್ಮ ಗಮನಕ್ಕೆ ಬರುವ ಅಂಶಗಳೆಂದರೆ ಹಳೆಯ ಮಾನದಂಡಗಳು ನಾಶವಾದಾಗ ಅವು ಪ್ರತಿನಿಧೀಕರಿಸುತ್ತಿದ್ದ ಕೆಲವು ಕೌಟುಂಬಿಕ ವ್ಯವಸ್ಥೆಗಳು ಹಾಗೂ ಮೌಲ್ಯಗಳು

ಹಾಗೆಯೇ ಉಳಿದು ಹೋದವು. ಆದರೆ ಈ ವ್ಯವಸ್ಥೆಯನ್ನು ಮತ್ತು ಮೌಲ್ಯವನ್ನು ಗುರುತಿಸಿ, ಅದಕ್ಕೆ ಮಾನ್ಯತೆ ನೀಡಿ ಅವನ್ನು ಗೌರವಿಸುವ ವಿಷಯದಲ್ಲಿ ಆಧುನಿಕ ವ್ಯವಸ್ಥೆ ನಿರಾಸಕ್ತಿ ವಹಿಸುವ ಮೂಲಕ ಮಹಿಳೆಯರಿಗೆ ಅನ್ಯಾಯವೆಸಗಿದೆ.

ನಮ್ಮ ದೇಶದಲ್ಲಿ ಪ್ರಾಚೀನ ಕಾಲದಿಂದಲೂ ಬೆಳೆದು ಬಂದಿರುವ ರೂಢಿ ಸಂಪ್ರದಾಯಗಳು, ಆಚಾರ ವಿಚಾರಗಳು, ಮಹಿಳೆಯರ ಬದುಕಿನ ಮೇಲೆ ಅತ್ಯಂತ ಗಾಢವಾದ ಪರಿಣಾಮಗಳನ್ನು ಬೀರಿವೆ. ಸಾಮಾಜಿಕ ಮೌಲ್ಯಗಳೆನಿಸಿದ ಕುಟುಂಬ, ಮದುವೆ, ಸಂಪ್ರದಾಯ, ನಂಬಿಕೆಗಳು ಇವೆಲ್ಲವೂ ಧರ್ಮದ ಸುತ್ತಲೂ ಸುತ್ತುವರೆಯುತ್ತಾ ಮಹಿಳೆಯನ್ನು ಆಳುತ್ತಲೇ ಬಂದಿರುವುದರಿಂದ ಅವಳು ತನ್ನ ಅಸ್ತಿತ್ವದ ಹುಡುಕಾಟದಲ್ಲಿ ವಿಫಲಳಾಗುತ್ತಿದ್ದಾಳೆ. ಮಹಿಳೆಯೇನಾದರೂ ಸ್ವತಂತ್ರಳಾಗಬೇಕು, ತನ್ನ ಸ್ವಂತ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಬೇಕು ಎಂದು ಬಯಸಿದರೆ ಅದಕ್ಕಾಗಿ ಹೋರಾಟಗಳನ್ನು ನಡೆಸಬೇಕಾಗುತ್ತದೆ. ಹಾಗೆಯೇ ಈ ಪುರುಷ ನಿರ್ಮಿತ ಗೋಡೆಗಳನ್ನು ಒಡೆದು ಹೊರಬರಬೇಕಾಗಿದೆ. ಪ್ರಸ್ತುತ ಅಧ್ಯಯನವು ನಾಟಿ ವೈದ್ಯಪದ್ಧತಿಯಲ್ಲಿ ಮಹಿಳೆಯರ ಜೀವನ ಸ್ಥಿತಿಗತಿಗಳನ್ನು ನೋಡುತ್ತಿದೆಯಾದ್ದರಿಂದ ಈ ವೈದ್ಯ ವೃತ್ತಿಯನ್ನು ಅನುಸರಿಸುತ್ತಿರುವ ಮಹಿಳೆಯರು ಕೇವಲ ಕುಟುಂಬಕ್ಕೆ ಮಾತ್ರ ಸೀಮಿತರಾಗಿದ್ದು ಅವರ ಸಾಮಾಜಿಕ, ರಾಜಕೀಯ, ಆರ್ಥಿಕ ಸ್ಥಿತಿಗತಿಗಳು ಸುಧಾರಿಸದೆ ಇರುವುದನ್ನು ಕಾಣಲಾಗಿದೆ. ಮುಖ್ಯವಾಗಿ ಶೈಕ್ಷಣಿಕ ಕ್ಷೇತ್ರದಲ್ಲಿ ಬಹಳಷ್ಟು ಹಿಂದುಳಿದಿದ್ದಾರೆ. ಈ ನಾಟಿವೈದ್ಯ ವೃತ್ತಿಯು ಒಂದು ಪ್ರಮುಖ ಕಸುಬಾಗಿರದೆ ಒಂದು ಉಪಕಸುಬಾಗಿರುವುದರಿಂದ ಮಹಿಳೆಯರು ಹೆಚ್ಚಾಗಿ ಒಂದು ಹವ್ಯಾಸವಾಗಿ ತೆಗೆದುಕೊಂಡಿರುವುದನ್ನು ಮಾನ್ವಿ ತಾಲೂಕಿನ ವ್ಯಾಪ್ತಿ ಪ್ರದೇಶಗಳಲ್ಲಿ ಕಂಡುಕೊಳ್ಳಲಾಗಿದೆ. ಈ ನಿಟ್ಟಿನಲ್ಲಿ ಈ ಅಧ್ಯಯನದಿಂದ ಕಂಡುಕೊಂಡ ವಿಷಯಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

### ೫.೧. ಅಧ್ಯಯನದ ಫಲಿತಗಳು

೧. ನಾಟಿ ವೈದ್ಯಪದ್ಧತಿಯನ್ನು ಮುಖ್ಯವಾಗಿ ಸಮಾಜ ವ್ಯವಸ್ಥೆಯಲ್ಲಿನ ಕೆಳವರ್ಗದ ಮತ್ತು ಮಧ್ಯಮವರ್ಗದ ಕುಟುಂಬಗಳಲ್ಲಿನ ಮಹಿಳೆಯರು ಹೆಚ್ಚಾಗಿ ಅವಲಂಬಿಸಿದ್ದಾರೆ.

೨. ಮೊದಮೊದಲು ಈ ನಾಟಿ ವೈದ್ಯಪದ್ಧತಿಯು ಇಡೀ ಒಂದು ಕುಟುಂಬಕ್ಕೆ ಜೀವನಾಧಾರವಾಗಿತ್ತು. ಆದರೆ ಇಂದು ಇದು ಒಂದು ಉಪಕಸುಬಾಗಿ ಪರಿವರ್ತಿತಗೊಂಡಿದೆ.

೩. ಈ ನಾಟಿವೈದ್ಯ ಪದ್ಧತಿ ಚಿಕಿತ್ಸೆಯಲ್ಲಿ ತೊಡಗಿಕೊಂಡಿರುವ ಮಹಿಳೆಯರು ಕುಟುಂಬಕ್ಕೆ ಮಾತ್ರ ಸೀಮಿತರಾಗಿರುವುದು ಕಂಡುಕೊಳ್ಳಲಾಗಿದೆ.

೪. ಈ ನಾಟಿವೈದ್ಯ ಪದ್ಧತಿಯು ಒಂದು ಉಪಕಸುಬಾಗಿದ್ದರೂ ಸಹ ಎಲ್ಲೋ ಒಂದು ಕಡೆ ಕುಟುಂಬ ಜೀವನಕ್ಕೆ ಆಧಾರವಾಗಿ ನಿಂತಿದೆ.

೫. ಆಧುನಿಕ ವೈದ್ಯಪದ್ಧತಿಗಳಿಗೆ ಈ ನಾಟಿ ವೈದ್ಯ ಪದ್ಧತಿ ಪೈಪೋಟಿಯನ್ನು ನೀಡುವಲ್ಲಿ ವಿಫಲವಾಗಿದೆ.

೬. ಈ ವೈದ್ಯಪದ್ಧತಿಯಲ್ಲಿ ತೊಡಗಿಕೊಂಡಿರುವ ಮಹಿಳೆಯರು ಕೇವಲ ಪುರುಷರಿಗೆ ಸಹಾಯಕರಾಗಿಯೂ ಹಾಗೂ ಸ್ವತಂತ್ರವಾಗಿ ಗುರುತಿಸಲ್ಪಡುತ್ತಿದ್ದಾರೆ.

೭. ಸರ್ಕಾರದಿಂದ ಯಾವುದೇ ಸೌಲಭ್ಯಗಳು ಈ ವೈದ್ಯಪದ್ದತಿಯನ್ನು ಅನುಸರಿಸುತ್ತಿರುವ ಮಹಿಳೆಯರಿಗೆ ದೊರೆಯುತ್ತಿಲ್ಲ.

೮. ಸಮಾಜ ವ್ಯವಸ್ಥೆಯು ವೃತ್ತಿಯಲ್ಲಿನ ಮಹಿಳೆಯನ್ನು ನೋಡುವ ದೃಷ್ಟಿಕೋನ ಬದಲಾಗಿಲ್ಲ. ಅಂದರೆ ಯಾವುದೇ ಪ್ರಾತಿನಿಧಿಕ ಸ್ಥಾನಮಾನಗಳನ್ನು ನೀಡಿಲ್ಲ.

೯. ಹೆಚ್ಚು ಹೆಚ್ಚು ಸಂಪ್ರದಾಯ, ಆಚರಣೆ, ರೂಢಿ ಪದ್ಧತಿಗಳಿಗೆ ಈ ನಾಟಿ ವೈದ್ಯಪದ್ದತಿ ಅವಲಂಬಿಸಿರುವುದು ಕಂಡುಬರುತ್ತಿದೆ.

೧೦. ಸಾಮಾನ್ಯ ಕಾಯಿಲೆಗಳಿರಬಹುದು. ವಿಶಿಷ್ಟ ಕಾಯಿಲೆಗಳಿರಬಹುದು, ಮಕ್ಕಳಿಗೆ ಮತ್ತು ಮಹಿಳೆಯರಿಗೆ ಸಂಬಂಧಿಸಿದ ಕಾಯಿಲೆಗಳಿರಬಹುದು ಎಲ್ಲಾ ಕಾಯಿಲೆಗಳಿಗೂ ಸಹ ವೈದ್ಯಕೀಯ ಚಿಕಿತ್ಸೆ ಈ ವೈದ್ಯಪದ್ಧತಿಯಲ್ಲಿರುವುದು ಕಂಡುಬರುತ್ತದೆ.

೧೧. ಮಹಿಳೆಯರು ಈ ಪದ್ಧತಿಯಲ್ಲಿನ ಭಾಗವಹಿಸುವಿಕೆಯನ್ನು ದುಡಿಮೆ ಎಂದು ಪರಿಗಣಿಸದೆ. ಕೇವಲ ಅವಳ ಜವಾಬ್ದಾರಿ ಎಂದು ಪರಿಗಣಿಸಲ್ಪಡುತ್ತಿದೆ.

ಈ ಎಲ್ಲಾ ವಿಷಯಗಳನ್ನು ಕಂಡುಕೊಂಡ ನಂತರ ಅಧ್ಯಯನವು ಕೆಲವು ಸಲಹೆಗಳನ್ನು ಕೊಡಬಯಸುತ್ತದೆ.

### ೫.೨ ಅಧ್ಯಯನದ ಸಲಹೆಗಳು

೧. ನಾಟಿ ವೈದ್ಯ ಪದ್ಧತಿಯ ಪರಂಪರೆಯು ಪ್ರಾಚೀನವಾದುದ್ದರಿಂದ ಮತ್ತು ಗ್ರಾಮೀಣ ಜನರಿಗೆ ಇದು ಅವಶ್ಯಕವಾಗಿರುವದರಿಂದ ಇದನ್ನು ಉಳಿಸುವಿಕೆಯ ಕಡೆಗೆ ಸರ್ಕಾರ ಗಮನಹರಿಸಬೇಕಾಗಿದೆ.

೨. ನಾಟಿ ವೈದ್ಯಪದ್ಧತಿಯು ಹೆಚ್ಚಾಗಿ ಪ್ರಕೃತಿಯನ್ನೇ ಅವಲಂಬಿಸಿರುವುದರಿಂದ ಅತೀ ಹೆಚ್ಚಿನ ಅರಣ್ಯಗಳನ್ನು ಬೆಳೆಸುವುದು ಮುಖ್ಯವಾಗಿ ಔಷಧೀಯ ಸಸ್ಯಗಳನ್ನು ಬೆಳೆಸುವುದರ ಕಡೆಗೆ ಗಮನಹರಿಸಬೇಕಾಗಿದೆ.

೩. ಮಹಿಳೆಯರು ಈ ವೈದ್ಯಪದ್ಧತಿಯಲ್ಲಿ ಪಾಲ್ಗೊಳ್ಳುವಿಕೆಯನ್ನು ದುಡಿಮೆ ಎಂದು ಪರಿಗಣಿಸಬೇಕು.

೪. ಈ ವೈದ್ಯ ಪದ್ದತಿಯನ್ನು ಇತರೆ ವೈದ್ಯ ಪದ್ಧತಿಗಳಂತೆ ಶೈಕ್ಷಣಿಕ ಕ್ಷೇತ್ರದಲ್ಲಿ ಅಳವಡಿಸುವುದರ ಮೂಲಕ ಅಧ್ಯಯನ ನಡೆಸುವಂತಾಗಬೇಕು.

೫. ಈ ನಾಟಿ ವೈದ್ಯ ಚಿಕಿತ್ಸೆಯಲ್ಲಿ ಅನುಸರಿಸುವ ವಿಧಾನಗಳನ್ನು ಗ್ರಂಥರೂಪದಲ್ಲಿ ಬರೆದಿಡುವುದರ ಮೂಲಕ ಅದನ್ನು ಉಳಿಸುವ ಕಾರ್ಯದಲ್ಲಿ ತೊಡಗಬೇಕು.

೬. ಪ್ರತಿಯೊಂದು ಗ್ರಾಮಗಳಲ್ಲಿ ಸ್ತ್ರೀಶಕ್ತಿ ಸಂಘಗಳು, ಮಹಿಳಾ ಸ್ವಸಹಾಯ ಸಂಘಗಳನ್ನು ಸ್ಥಾಪಿಸುವುದರ ಮೂಲಕ ಅವರಲ್ಲಿ ಸ್ವಯಂವೃತ್ತಿ ತರಬೇತಿಗಳನ್ನು ನೀಡುವುದು ಮತ್ತು ಈ ವೈದ್ಯಪದ್ಧತಿಯಲ್ಲಿ ತೊಡಗುವಂತೆ ಮಾಡಬೇಕು.

೭. ಮುಖ್ಯವಾಗಿ ಗ್ರಾಮೀಣ ಭಾಗದ ಮಹಿಳೆಯರು ಶುಶಿಕ್ಷಿತರಾಗಲು ಕ್ರಮಗಳನ್ನು ಕೈಗೊಳ್ಳಬೇಕು.

೮. ಈ ವೈದ್ಯಪದ್ಧತಿಯ ಬಗ್ಗೆ ಜನರಲ್ಲಿ ಅರಿವನ್ನು ಮಾಡಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

೯. ಈ ವೈದ್ಯ ಚಿಕಿತ್ಸೆಗೆ ಮಾರುಕಟ್ಟೆಯ ಮೌಲ್ಯ ದೊರೆಯುವ ನಿಟ್ಟಿನಲ್ಲಿ ಸರಕಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

ಒಟ್ಟಿನಲ್ಲಿ ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನಲ್ಲಿನ ಮಹಿಳೆಯರು ಈ ನಾಟಿ ವೈದ್ಯ ಪದ್ದತಿಯಲ್ಲಿ ತೊಡಗಿರುವುದನ್ನು ಕಾಣಲಾಗಿದೆ. ಮತ್ತು ಇವರ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಾನಮಾನಗಳು ಸಹ ಅಷ್ಟೊಂದು ಉತ್ತಮವಾಗಿಲ್ಲದಿರುವುದು ಮತ್ತು ಪುರುಷರಿಗೆ ಅದೀನಳಾಗಿಯೇ ಇರುವುದನ್ನು ಕಾಣಲಾಗಿದೆ. ಈ ನಿಟ್ಟಿನಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶವಾದ ಮಾನ್ವಿ ತಾಲೂಕಿನಲ್ಲಿನ ಮಹಿಳೆಯರ ಜೀವನ ಸ್ಥಿತಿಗತಿಗಳು ಉತ್ತಮವಾಗುವ ನಿಟ್ಟಿನಲ್ಲಿ ಮತ್ತು ಈ ನಾಟಿ ವೈದ್ಯಪದ್ಧತಿಯನ್ನು ಉಳಿಸುವ ನಿಟ್ಟಿನಲ್ಲಿ ಸರಕಾರ ಕ್ರಮಗಳನ್ನು ಜರುಗಿಸಬೇಕಾಗಿದೆ.

# ಅನುಬಂಧ

## ಗ್ರಂಥಋಣ

೧. ಕೆ.ಸರೋಜ, ೨೦೦೧, ಮಹಿಳೆ ಮತ್ತು ಆರೋಗ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಕಲ್ಪನಾ ಅರುಣ್, ೨೦೦೭, ಗೃಹ ಸಂಜೀವಿನಿ, ನವಭಾರತ ಪ್ರಕಾಶನ, ಬೆಂಗಳೂರು.

೩. ಟಿ.ಗೋವಿಂದರಾಜು, ೨೦೦೩, ಜನಪದ ವೈದ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು.

೪. ಬಿ.ಕೆ.ರೋಹಿಣಿ, ಗ್ರಾಮೀಣ ವೈದ್ಯ, ಜನಪದ ಪ್ರಕಾಶನ, ಬೆಂಗಳೂರು.

೫. ಅಶೋಕ ಡಿ.ಸಾತ್ಪುತೆ, ೧೯೯೭, ಆರ್ಯುಭಾರತಿ, ಚೇತನ ಪ್ರಕಾಶನ, ಮೈಸೂರು.

೬. ಸಾವಿತ್ರಿ ದೈತೋಟ, ೨೦೦೫, ಸುಲಭ ಚಿಕಿತ್ಸೆ, ಆಯುರ್ವೇದ ಪ್ರಕಾಶನ, (ರಿ), ಪಾಣಾಜೆ, ಪುತ್ತೂರು.

೭. ಟಿ.ಸಿದ್ದಪ್ಪ, ೨೦೦೩, ವೈದ್ಯ ಪದ್ಧತಿಗಳ ಅಂತರಂಗ, ವಿಜ್ಞಾನ ಪುಸ್ತಕ ಪ್ರಕಾಶನ, ಬೆಂಗಳೂರು.

೮. ಜ್ಯೋತಿ ಶಶಿಕುಮಾರ್, ೨೦೦೭, ಮಹಿಳಾ ಸಮಾಜಿಕತೆ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೯. ಎಸ್.ಎಸ್.ಶ್ರೀಮತಿ, ಶಿವಾನಂದ ವಿರಕ್ತಮಠ, ಜೆ.ಕೃಷ್ಣ, ೨೦೦೭, ಮಹಿಳಾ ಆರ್ಥಿಕತೆ, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ವಿಜಯಶ್ರೀ ಸಬರದ, ೨೦೦೦, ಮಹಿಳೆ ಶೋಷಣೆ ಸವಾಲುಗಳು, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೧೧. ಸಣ್ಣ ವೀರಪ್ಪ ದೊಡ್ಡಮನಿ, ೨೦೦೮, ಶಿಳ್ಳೇಕ್ಯಾತ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೨. ಪಿ.ಮಹೇಂದರ್‌ರಾವ್ ಸಾಸ್‌ನೀಕ್,

೧೩. ಎಂ.ಚಂದ್ರಪೂಜಾರಿ, ಟಿ.ಆರ್.ಚಂದ್ರಶೇಖರ್, ೨೦೦೩, ಅಭಿವೃದ್ಧಿ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪. ಇಂದಿರಾ ಜೈ ಪ್ರಕಾಶ್, ೨೦೦೯, ಸ್ತ್ರೀವಾದಿ ಮನೋವಿಜ್ಞಾನ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫. ಸಭಿಹಾ ಭೂಮಿಗೌಡ, ಮಹಿಳೆ ಸಂಘಟನೆ ಹೋರಾಟ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೬. ಗೀತಾಕೃಷ್ಣಮೂರ್ತಿ, ಮಹಿಳೆ, ಸಮಾಜ, ಕಾನೂನು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೭. ಎಚ್.ಎಸ್.ಶ್ರೀಮತಿ, ೨೦೦೦, ಮಹಿಳಾ ಅಧ್ಯಯನ ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೮. ಮರಾಠಿಯಲ್ಲಿ ಲೀಲಾ ಪಾಟೀಲ, ಕನ್ನಡಕ್ಕೆ ವಿಠಲರಾವ್ ಟಿ.ಗಾಯಕ್ವಾಡ್, ೨೦೦೯, ಭಾರತೀಯ ಸ್ತ್ರೀ ಜೀವನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೯. ಎಂ.ಚಂದ್ರಪೂಜಾರಿ, ೨೦೦೮, ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೦. ಎಚ್.ಎಸ್.ಶ್ರೀಮತಿ, ೨೦೦೪, ಹೆಣ್ಣು ಹೆಂಗಸು, ಬ್ಯಾಸದಕೆರೆ ಪ್ರಕಾಶನ, ಬ್ಯಾಲದಕೆರೆ, ಮಂಡ್ಯ ಜಿಲ್ಲೆ.

೨೧. ನಾರಾಯಣಶಾಸ್ತ್ರಿ, ೨೦೦೫, ಆಯುರ್ವೇದ ಕೈಪಿಡಿ, ಮೆ.ಪಿ.ಸಿ.ಶಾಬಾದಿಮಠ ಬುಕ್ ಡಿಪೋ, ಗದಗ

೨೨. ಎಚ್.ಎಸ್.ಶ್ರೀಮತಿ, ೨೦೦೭, ಸಿಮೋನ್ ದ ಬೋವಾ, ಅಧ್ಯಯನ ಮಂಡಲ, ಬೆಂಗಳೂರು.

೨೩. ಪಾನ್ಯ ಶಂಕರಮೂರ್ತಿ, ೨೦೦೭, ಆಯುರ್ವೇದದ ಸುಲಭ ಚಿಕಿತ್ಸೆಗಳು, ಸಾಹಿತ್ಯ ನಂದನ, ಬೆಂಗಳೂರು.

೨೪. ಸಿದ್ಧವೈದ್ಯ ಪಿ.ಎಸ್., ೨೦೦೩.೦೪, ಮಾಲಿಕಾ ವಿಜ್ಞಾನ ಸಿದ್ಧ ಪದ್ಧತಿ, ಅಗಸ್ತ್ಯ ಸಿದ್ಧ ಸಾಹಿತ್ಯ ಸಂಶೋಧನಾ ಕೇಂದ್ರ, ಮೈಸೂರು.

೨೫. ಎಚ್.ಎಸ್.ಶ್ರೀಮತಿ, ಶಿವಾನಂದ ಎಸ್.ವಿರಕ್ತಮಠ, ಜೆ.ಕೃಷ್ಣ, ೨೦೦೭, ಮಹಿಳೆ ದುಡಿಮೆ ಮತ್ತು ಬಿಡುವು, ಮಹಿಳಾ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೬. ಆಲೂರು ನಾಗರಾಜ್, ೨೦೦೦, ಹೋಮಿಯೋ ಸಂಜೀವಿನಿ, ವಿದ್ಯಾಮಿತ್ರ ಪ್ರಕಾಶನ, ಗೋಕಾಕ್.

೨೭. ಸತ್ಯನಾರಾಯಣಭಟ್.ಪಿ., ೧೯೯೭, ಬೆಂಗಳೂರು ಜಿಲ್ಲೆಯ ಬಗಾಲ ವೈದ್ಯರು, ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಎಂ.ಜೆ.ಎಂ.ಕಾಲೇಜ್, ಉಡುಪಿ.

೨೮. ಎಂ.ಗೋಪಾಲಕೃಷ್ಣರಾವ್, ೧೯೮೨, ಬಡವರ ವೈದ್ಯ ೨, ಸಾಹಿತ್ಯ ಬಂಡಾರ, ಬೆಂಗಳೂರು.

೨೯. ಲೇ.ದಿ.ರಾಮಕೃಷ್ಣಯ್ಯ, ೨೦೦೦, ಆಯುರ್ವೇದಸಾರ ಭಾಗ ೩, ಮುನಿಯಾಲು ಆಯುರ್ವೇದ ಸಂಶೋಧನಾ ಸಂಸ್ಥೆ, ಮಣಿಪಾಲ.

೩೦. ಶ್ರೀ ಶಿವಕುಮಾರ ಸ್ವಾಮಿಗಳು, ೨೦೦೪, ಆರೋಗ್ಯ ದರ್ಪಣ, ರಾಜಲಕ್ಷ್ಮೀ ಪ್ರಕಾಶನ, ಬನಶಂಕರಿ ಮೊದಲನೆ ಹಂತ, ಬೆಂಗಳೂರು.

೩೧. ಬಿ.ಎಸ್.ಸಣ್ಣಯ್ಯ ಎಂ.ಎ, ೧೯೯೩, ವೈದ್ಯಕಂದ, ಅಭಿನಂದನ ಪ್ರಕಾಶನ, ಮೈಸೂರು.

೩೨. ಜೆ.ಪಿ.ಭಟ್ಟ್, ಮದ್ಗುಣಿ, ೧೯೯೩, ಆಯುರ್ವೇದ ಪರಿಚಯ, ಪರಂಪರಾಗತ ವೈದ್ಯರ ಕೇಂದ್ರ ಕ್ರಿಯಾ ಸಮಿತಿ ರಿ, ಯಲಾಪುರ, ಉತ್ತರ ಕನ್ನಡ

೩೪. ಪ್ರೊ.ಟಿ.ಎಲ್.ದೇವರಾಜು, ೨೦೦೦, ಪ್ರಸೂತಿ ತಂತ್ರ ಸ್ತ್ರೀರೋಗಗಳು ಬಾಲ ರೋಗಗಳು ಮತ್ತು ಕುಟುಂಬ ನಿಯಂತ್ರಣ, ಪ್ರಕಾಶನ ಸಾಹಿತ್ಯ, ಬೆಂಗಳೂರು.

೩೫. ನಾ.ಮೊಗಸಾಲೆ, ೨೦೦೧ ಆರೋಗ್ಯ ಅನಾರೋಗ್ಯದ ನಡುವೆ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು.

೩೬. ದೋತ್ರೆಮತಿ, ೧೯೮೯, ಆರೋಗ್ಯಶಿಕ್ಷಣ ಮತ್ತು ಭೋಧಕರು, ದೋತ್ರೆ ಪ್ರಕಾಶನ, ಗೋಗಿ, ಗುಲ್ಬರ್ಗಾ.

೩೭. ಸುಶೀಲಾ ಚಂದ್ರಶೇಖರ್, ೧೯೯೫, ಜನಪ್ರಿಯ ಪ್ರಕೃತಿ ಚಿಕಿತ್ಸೆ, ವಿಜಯವಾಹಿನಿ ಪಬ್ಲಿಕೇಷನ್, ಬೆಂಗಳೂರು.

೩೮. ಮೊ.ಕ.ಗಾಂಧಿ, ೨೦೦೫, ಪ್ರಕೃತಿ ಚಿಕಿತ್ಸೆ, ಮನೋಹರ ಘಾಣಿಕರು, ಸಮಾಜ ಪುಸ್ತಕಾಲಯ, ಧಾರವಾಡ.

೩೯. ಕೆ.ಪೂರ್ಣಿಮಾಕೋಡೂರ್, ೨೦೦೬, ಸರ್ವ ರೋಗಕ್ಕೆ ಸುಲಭ ಚಿಕಿತ್ಸೆ, ಆದಿ ಪುಸ್ತಕ ಮನೆ, ಶ್ರೀನಂದ ಆಡ್ಸ್ ಅಂಡ್ ಗ್ರಾಫಿಕ್ಸ್, ಬೆಂಗಳೂರು.

೪೦. ಸತ್ಯನಾರಾಯಣ, ಭಟ್ ಪಿ. ೨೦೦೭, ಕರ್ನಾಟಕ ವಿಷವೈದ್ಯ ಪರಂಪರೆ, ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಕೃಷ್ಣಾಪುರದೊಡ್ಡಿ.

# ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಜಾತಿ | ವಿದ್ಯಾರ್ಹತೆ | ಊರು |
|---|---|---|---|---|---|
| ೦೧. | ಹುಲಿಗೆಮ್ಮ | ೪೮ | ಮಾದರು | ಇಲ್ಲ | ಪೋತ್ನಾಳ |
| ೦೨. | ಲಕ್ಷ್ಮಿ | ೩೬ | ಮಾದರು | ಇಲ್ಲ | ಪೋತ್ನಾಳ |
| ೦೩. | ಸುನಂದಮ್ಮ | ೫೨ | ಮಾದರು | ೪ನೇ ತರಗತಿ | ಪೋತ್ನಾಳ |
| ೦೪. | ಅಮೃತಮ್ಮ | ೬೨ | ಮಾದರು | ಇಲ್ಲ | ಪೋತ್ನಾಳ |
| ೦೫. | ಹುಲಿಗೆಮ್ಮ | ೪೭ | ನಾಯಕರು | ಇಲ್ಲ | ಕರಡಿಗುಡ್ಡ |
| ೦೬. | ಮೂಕಮ್ಮ | ೩೨ | ನಾಯಕರು | ಇಲ್ಲ | ಕರಡಿಗುಡ್ಡ |
| ೦೭. | ಅಂಬ್ರಮ್ಮ | ೪೫ | ಕುರುಬರು | ಇಲ್ಲ | ಮಾಚನೂರು |
| ೦೮. | ದ್ಯಾಮಮ್ಮ | ೬೪ | ನಾಯಕರು | ಇಲ್ಲ | ಮಾಚನೂರು |
| ೦೯. | ಲಕ್ಷ್ಮಮ್ಮ | ೪೯ | ಕುರುಬರು | ಇಲ್ಲ | ಮಾಚನೂರು |
| ೧೦. | ನಾಗಮ್ಮ | ೬೦ | ವಡ್ಡರು | ಇಲ್ಲ | ಕುರ್ಡಿ |
| ೧೧. | ಹೊನ್ನಮ್ಮ | ೫೬ | ವಡ್ಡರು | ಇಲ್ಲ | ಕುರ್ಡಿ |
| ೧೨. | ಬಸಮ್ಮ | ೭೦ | ನಾಯಕರು | ಇಲ್ಲ | ಮಾನ್ವಿ |
| ೧೩. | ಸುಶೀಲಮ್ಮ | ೩೬ | ಲಿಂಗಾಯಿತರು | ಪಿ.ಯು.ಸಿ. | ಮಾನ್ವಿ |
| ೧೪. | ಮರಿಯಮ್ಮ | ೪೦ | ಲಿಂಗಾಯಿತರು | ಎಸ್.ಎಸ್.ಎಲ್.ಸಿ. | ದಿನ್ನಿ |
| ೧೫. | ಪದ್ಮಾವತಿ | ೪೨ | ಕುರುಬರು | ಎಂಟನೇ ತರಗತಿ | ನೀರಮಾನ್ವಿ |

